ತೊದಲ್ನುಡಿ ಗ್ರಂಥಮಾಲೆ—ನುಡಿ ೭

# ಮುಂದಿನ ದೇವರು

ಕೆ. ಕೆ. ಶೆಟ್ಟಿ,
ಸಂಪಾದಕ, ನವಯುಗ, ಮಂಗಳೂರು.

'ಅಸತೋ ಮಾ ಸದ್ಗಮಯ,
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾಮೃತಂಗಮಯ'
ಉಪನಿಷತ್

ಕೆನರಾ ಛಾಪಖಾನೆ, ಮಂಗಳೂರು.

1936

೦—೨—೦

ಕಿರಿಯರ ಪ್ರಪಂಚ, ಉಡುಪಿ.

# ಮುಂದಿನ ದೇವರು.



ದೇವ ಧರ್ಮಗಳನ್ನು ಸೃಷ್ಟಿಸಿದವನು ಮಾನವನು— ತನ್ನ ಉಪಯೋಗಕ್ಕಾಗಿ, ತನ್ನ ಜೀವನವನ್ನು ನ್ಯಾಯಮಾರ್ಗದಲ್ಲಿ ಕಳೆದೊಯ್ಯುವುದಕ್ಕಾಗಿ ಎಂದು. ಆದರೆ ಧರ್ಮದ ಸರ್ಪವು ಹೆಡೆಯನ್ನರಳಿಸಿ ಅವನನ್ನೇ ಹೊಡೆಯಲು ಬಂದಿದೆ— ಅದನ್ನು ಕಂಡು ಇಂದಿನ ತರುಣನ ನೆತ್ತರು ಬಿಸಿಯೇರುತ್ತದೆ. ಅದರಿಂದ ಅವನು ದೇವಧರ್ಮಗಳನ್ನು ನಿರ್ಮೂಲ ಮಾಡಹೊರಟರೆ ಆಶ್ಚರ್ಯವಲ್ಲ. ಈ ಪ್ರಬಂಧದಲ್ಲಿ ಅಂತಹ ಹೃದಯದುರಿಯು ವ್ಯಕ್ತವಾಗಿದೆ. ಪಾಠಕರು ಇದನ್ನು ಸದ್ಭಾವದಿಂದ ಓದಿದರೆ ಅದರಲ್ಲಿರುವ ಸತ್ಯದ ಅರಿವಾಗದಿರದು.

ಪ್ರಕಾಶಕರು

22—1—1936.

# ಮುಂದಿನ ದೇವರು.

ನಮಹತ್ತಾದ ಕ್ರಾಂತಿಯುಗವಿದು. ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಈಗ ವಿಸ್ಮಯಕರ ಮಾರ್ಪಾಟಗಳುಂಟಾಗು ತ್ತಿವೆ. ಕಾಲಗತಿಯು ಮಿಂಚಿನ ವೇಗ ಪಡೆದಿದೆ. ಇಂದಾದುದು ನಿನ್ನೆ ತಿಳಿದಿರಲಾರದು. ನಾಳೆ ಏನಾಗುವುದೆಂದು ಇಂದು ಹೇಳ ಲಾಗದು. ಹೊಸ ಹುರುಪು, ಹೊಸ ದೃಷ್ಟಿ, ಹೊಸ ಸೃಷ್ಟಿಯು ಇಂದಿನ ಕಾಲದ ಕರೆಯಾಗಿ ಲೋಕದ ತರುಣ ಹೃದಯವನ್ನಾ ವರಿಸಿ ಪ್ರಚಂಡ ಬಂಡಾಯಕ್ಕದನ್ನು ಮುಂದೂಡುತ್ತಿರುವುದು. ಅದೊಂದು ಮಹಾ ಪ್ರವಾಹವೇ ಲೋಕವ್ಯಾಪಕವಾಗಿ ಹಬ್ಬಿರು ವುದು. ದಯೆ ದಾಕ್ಷಿಣ್ಯ, ಪೂಜೆಪುರಸ್ಕಾರ, ಹಿರಿತನ ಹಳೆತನ ವನ್ನರಿಯದು—ತನ್ನ ಸ್ವಚ್ಛಂದ ಪ್ರವಾಹಕ್ಕೆ ಅಡ್ಡ ಬರುವ, ತೋ ರುವಿಕೆಗೆ ಮಹತ್ವ ಹಾಗೂ ಅನಿವಾರ್ಯವೆನಿಸುವ ಕಟ್ಟು ತಡೆಗ ಳನ್ನೆಲ್ಲಾ ಒಡೆದು ಕೊಚ್ಚಿ ಹರಿಯುವದದು. ಇಂತಹ ಪ್ರಚಂಡ ನೆರೆಯನ್ನು ಯಾರಿಂದಲೂ, ಯಾವ ರೀತಿಯಿಂದಲೂ ತಡೆದಿ ಡಲು ಸಾಧ್ಯವಿಲ್ಲ. ಒಂದೊಮ್ಮೆ ಕೆಲಸಮಯ ಅದು ತಡೆ ಗಟ್ಟಲ್ಪಟ್ಟರೂ, ಕಡೆಗದು ಮತ್ತಷ್ಟು ವೇಗದಿಂದ ತಡೆಯೊಡೆದು ಬೋರ್ಗರೆದು ಹರಿಯದಿರದು. ಈ ಪ್ರವಾಹದಲ್ಲಿ ಹಳೆಯ ಕೊಳೆ ಹೊಲೆಯೆಲ್ಲಾ ತೊಳೆದು ಬಳಿದು ಹೋಗಿ ನವಜೀವ ನದ ಬೆಳವಣಿಗೆಗೆ ಅನುಕೂಲ ಕ್ಷೇತ್ರವು ತಯಾರಾಗುವುದು. ಯಾರೇನು ಮಾಡಿದರೂ, ಎಂತಹ ಕೂಗೆಬ್ಬಿಸಿದರೂ ಕಾಲವು ತನ್ನ ಕೆಲಸ ಮಾಡಿಯೇ ಬಿಡುವುದು. ಅಂದಮೇಲೆ ಕಾಲ ಪುರುಷನಿಗೆ ಮಣಿದು ಕಾಲಸ್ಥಿತಿಗನುಗುಣ ಜೀವನ ಹಾಗೂ

ಸಮಾಜ ರಚನೆಗೆ ನೆರವಾಗುವುದು ವಿಚಾರಶೀಲ ಮಾನವನ ಕರ್ತವ್ಯವಲ್ಲವೇ?

ಯಾವ ವ್ಯಕ್ತಿ, ಸಂಸ್ಥೆ, ಧರ್ಮಗಳನ್ನಾಗಲಿ ಹಳಿಯುವುದು ಈ ಲೇಖದ ಉದ್ದೇಶವಲ್ಲ. ಲೋಕದ ಸ್ಥಿತಿಗತಿಗಳನ್ನೆಲ್ಲಾ ಯಾವ ಸ್ವಾರ್ಥ ಸಂಕುಚಿತೆಯೂ ಇಲ್ಲದ ಸ್ವಚ್ಛ ಮನಸ್ಸಿನ ವಿಮರ್ಶಕ ದೃಷ್ಟಿಯಿಂದ ಪರಿಶೀಲಿಸುವಾಗ, ಮನಃಸರಸ್ಸಿನಲ್ಲಿ ಒಂಪರ ಹಿಂದೊಂದು ಏರೇರಿ ಬರುವ ವಿಚಾರ ತರಂಗಗಳನ್ನು ವಾಚಕರ ಮುಂದಿಡುವುದೇ ಲೇಖಕನ ಇಂಗಿತ. ಇದಕ್ಕಾತನ ಅರ್ಹತೆಯೆಂದರೆ, ಕವಿರವೀಂದ್ರರು ಗೀತಾಂಜಲಿಯ ಅದೊಂದು ಗೀತೆಯಲ್ಲಿ ಹಾಡಿರುವಂತೆ, ಆತನು ಯಾವ ಗೂಡೊಳಗಣ ಹಕ್ಕಿಯೂ ಆಗಿರದೆ, ಗೂಡುಗಳು ಎಷ್ಟೊಂದು ಮನೋಹರ ಮತ್ತು ಸುಖ ಸುರಕ್ಷಿತವಾಗಿ ಆಕರ್ಷಣ ಬೀರಿದರೂ ಅವುಗಳೊಳಗೆ ನೇರದೆ, ಅದೆಷ್ಟು ಅಪಾಯಕರವಿದ್ದರೂ ವಿಶಾಲ ವಿಚಾರಾಕಾಶದಲ್ಲಿ ಎದೆಯುರಳಿಸಿ ಸ್ವೇಚ್ಛಾಪರವಾಗಿ ಪಕ್ಕ ಬಡಿದು ಹಾರಾಡುವ ಹಕ್ಕಿ. ಯಾವ ದೇವ ದೇವತೆಗಳ ನೆರೆಗಾಗಲಿ, ಧರ್ಮ ನಿಯಮಗಳ ಬಲೆಗಾಗಲಿ ಒಳಗಾಗಿಲ್ಲ ಆತ. ಆದುದರಿಂದಲೇ ನಿರ್ಭಯವಾಗಿ ಲೋಕದ ದೇವಧರ್ಮಗಳ ಮೇಲೆಲ್ಲಾ ಧಾಳಿ ನಡೆಸಲೆದೆಗೊಂಡು, ಆತನ ಸರಳ ಹಾಗೂ ತಿಳಿಮನಸ್ಸಿಗೆ ಹೊಳೆದ ವಿಚಾರಗಳನ್ನು ವಾಚಕರ ಮುಂದಿರಿಸಿರುವನು.

## ದೇವರನ್ನು ಹುಟ್ಟಿಸಿದುದೇ ಮಾನವ ಧರ್ಮದ ಅತಿ ಪುರಾತನ ಮೂಲ.

ದೇವರು ಮಾನವನನ್ನು ಉಂಟುಮಾಡಿ ಅವನ ಇಹಪರ ಸುಖಸಾಧನೆಗಾಗಿ ಧರ್ಮವನ್ನಿತ್ತನೆಂದು ಸರ್ವಸಾಮಾನ್ಯ ನಂಬಿಕೆ. ಮಾನವನು ತನ್ನ ಸುಖ ಸಮಾಧಾನಕ್ಕಾಗಿ ದೇವರನ್ನು ಕಲ್ಪಿಸಿ ಆತನನ್ನು ಸ್ವರ್ಗಕ್ಕೇರಿಸಿದನೆಂದು ಹಲವು ಮಂದಿ

ಸ್ವತಂತ್ರ ವಿಚಾರಿಗಳ ಪ್ರತಿಪಾದನೆ. ಹೀಗೆ ಪ್ರತಿಪಾದನೆ ಮಾಡು ವವರು ನಾಸ್ತಿಕರೇ ಅಲ್ಲ. ಆಸ್ತಿಕ ಶಿಖಾಮಣಿಗಳಾಗಿ ಜನ ಮಾನ್ಯರಾಗಿರುವವರೇ ಈ ಅಭಿಪ್ರಾಯವಿತ್ತಿರುತ್ತಾರೆ. 'ಮಾನ ವನು ದೇವರ ಅತ್ಯುದಾತ್ತ ಸೃಷ್ಟಿ' (Man is the noblest creation of God) ಎಂಬ ಪೋಪ್ ಸಾಹೇಬರ ವಾಕ್ಯ ವನ್ನು, ಇಂಗ್ಲೆಂಡಿನ ಸುಪ್ರಸಿದ್ಧ ಧರ್ಮಾಧಿಕಾರಿಗಳಾದ ಡೀನ್ ಇಂಜರು, 'ದೇವರು ಮಾನವನ ಅತ್ಯುದಾತ್ತ ಸೃಷ್ಟಿ' (God is the noblest creation of man) ಎಂದು ಮಾರ್ಪಡಿ ಸಿರುವರು. ವಂಶಪಾರಂಪರ್ಯವಾಗಿ ಬಂದು ನಮ್ಮ ರಕ್ತ ದೊಂದಿಗೆ ಸೇರಿಹೋಗಿರುವ ದೇವಧರ್ಮಗಳ ಕುರಿತಾದ ಕುರುಡು ನಂಬಿಕೆಗಳನ್ನು ಬಿಟ್ಟು ತುಸು ಶೋಧಕ ಮತ್ತು ವಿಮ ರ್ಶಕ ದೃಷ್ಟಿಯಿಂದ ಲೋಕದ ದೇವ ಧರ್ಮಗಳ ಮೂಲ ಮತ್ತು ಬೆಳವಣಿಗೆಗಳ ಸಂಗತಿಗಳನ್ನು ವಿಚಾರಿಸಿದರೆ ಮನ ವರಿಕೆಯಾಗುವ ವಿಷಯವದು. ಪ್ರಾಚೀನಕಾಲದ ಮಾತಂತಿರಲಿ, ಈಗ ನಾಗರಿಕ ಜನಾಂಗಗಳೆನಿಸುವವರು ಕಲ್ಪಿಸಿಕೊಂಡಿರುವ ದೇವಧರ್ಮಗಳ ಗೊಡವೆಯೇ ಇಲ್ಲದೆ, ಕೆಲವೊಂದು ನೀತಿ ನಿಯಮಗಳನ್ನವಲಂಬಿಸಿಕೊಂಡೇ ಸುಖವಾಗಿ ಜೀವನ ನಡಿಸುವ ಅನಾಗರಿಕರೆನಿಸುವ ಪಂಗಡಿಗರು ಹಲವು ಕಡೆಗಳಲ್ಲಿರುವು ದಿಲ್ಲವೇ? ಗುಡ್ಡಕಾಡುಗಳಲ್ಲಿರುವ ನಮ್ಮ ದೇಶದ ಮೂಲನಿವಾಸಿ ಗಳ ಹಲವು ಪಂಗಡಗಳಿಗೆ ಈಗಲೂ ನಮ್ಮ ದೇವಧರ್ಮಗಳ, ತತ್ವಜ್ಞಾನದ ಗಂಧಗಾಳಿಯಾದರೂ ಇರುವುದೇ? ಅವರು ಕೇವಲ ಕೆಲವೊಂದು ಸಾಮಾಜಿಕ ಕಟ್ಟು ಕಟ್ಟಳೆಗಳನ್ನು ಕಠಿಣವಾಗಿ ಪಾಲಿಸಿ, ನಾಗರಿಕರು, ದೇವಭಕ್ತರು, ಧರ್ಮಪರಾಯಣ ರೆಂದೆಲ್ಲಾ ಹೆಗ್ಗಳಿಕೆ ಪಡುವ ಹೆಚ್ಚಿನ ಜನರಿಗಿಂತ ನೀತಿವಂತ ರಾಗಿಯೂ, ಸತ್ಯಸಂಧರಾಗಿಯೂ ಬಾಳಿಕೊಂಡಿರುವುದಿಲ್ಲವೇ? ರಶ್ಯದಲ್ಲೀಗ ಮಿಲ್ಯಗಟ್ಲೆ ಜನರು, ದೇವಧರ್ಮಗಳಿಗೇನೇ ಬಹಿ

ಷ್ಕಾರ ಹಾಕಿ, ಅವುಗಳನ್ನಣಗಿಸಿ ಬಿಡಲು ಪ್ರಚಂಡ ಆಂದೋಲನ ವೆಬ್ಬಿಸಿ, ಪ್ರಪಂಚದಲ್ಲೆಲ್ಲಿಯೂ ಇಲ್ಲದ, ಬಹುತೇಕ ಸಾರ್ವತ್ರಿಕ ವಾದ ಸುಖಸಂಪತ್ತು ಸುಭಿಕ್ಷೆಯಿಂದ ಜೀವನ ನಡಿಸುವುದಿಲ್ಲವೇ? ಅವರ ಮೇಲೆ ಆಕಾಶ ಕಳಚಿ ಬಿದ್ದುದೇನು? ಅಂದಮೇಲೆ ಧರ್ಮ ದೇವರುಗಳಿಲ್ಲದೆ ಲೋಕದಲ್ಲಿ ಜೀವನವೇ ಅಸಾಧ್ಯವೆಂದೇನೂ ಅಲ್ಲವೆಂಬುದು ಸಿದ್ಧವಾಗುವುದು. ಹಾಗಾದರೆ ದೇವಧರ್ಮಗಳು ಹೇಗುಂಟಾದುವು? ಏತಕ್ಕುಂಟಾದುವು? ಎಂಬ ಪ್ರಶ್ನೆ ಹುಟ್ಟುತ್ತ ದೆ. ದೇವಧರ್ಮಗಳು ಮಾನವಜೀವಿಯ ಪ್ರಕೃತಿ ಮತ್ತು ಪರಿಸ್ಥಿತಿ ಗಳಿಂದುಂಟಾದುವು. ಸ್ವಾಭಾವಿಕವಾಗಿ ಸುಖಪ್ರಿಯನಾಗಿರುವ ಮನುಷ್ಯನ ಬುದ್ಧಿ ಆವಶ್ಯಕತೆಗಳಿಂದಲೇ ಅವು ಹುಟ್ಟಿವೆ. ಪ್ರಕೃತಿಯ ಒತ್ತಾಟದಿಂದಲೇ ಮಾನವನ ಮನಸ್ಸಿನಲ್ಲವು ಉದ ಯಿಸಿವೆ. ಕರ್ನಾಟಕದ ನಿರ್ಭೀತ ಸ್ವತಂತ್ರ ವಿಚಾರಿಗಳಲ್ಲಿ, ವಿಚಾರವಿಪ್ಲವಕಾರಿಗಳಲ್ಲಿ ಅಗ್ರಗಣ್ಯರಾದ ಪಂಡಿತ ತಾರಾ ನಾಥರು, ತನ್ನ 'ಧರ್ಮ ಸಂಭವ' ಅಥವಾ 'ಧರ್ಮದ ಹುಟ್ಟು' ಎಂಬ ಪುಸ್ತಕದಲ್ಲಿ ಬರೆದಿರುವಂತೆ, ದೇವ, ಧರ್ಮ, ಮತಗಳು ಮನುಷ್ಯನ ವಿಚಾರಾಚಾರ ಸರೋವರದಿಂದ ಮೇಲಕ್ಕೇರಿದ ಆವಿಯು. ನಾಗರಿಕ ಮನುಷ್ಯನ ಬುದ್ಧಿಯ ಸೆಕೆಯಿಂದುಂ ಟಾಗಿ ಆಕಾಶಕ್ಕೇರಿದ ಬಾಷ್ಪವು. ಪ್ರಾಚೀನ ಧರ್ಮದೇವರು ಗಳು ಮಾನವನ ಭೀತಿ, ಅಹಂಕಾರಗಳ ಸಂತತಿ. ಪ್ರಾಚೀನ ಮಾನವನು ಪ್ರಕೃತಿಯ ಭೀಕರ ಶಕ್ತಿಗಳಿಗೆ ಬೇರೆ ಬೇರೆ ಹೆಸ ರಿತ್ತು ದೇವದೇವತೆಗಳನ್ನು ನಿರ್ಮಿಸಿದನು. ಮತ್ತು ತನ್ನ ಊಹೆಯಿಂದ ಉದ್ಭವಿಸಿದ ದೇವ ದೇವತೆಗಳಿಗೆಲ್ಲಾ ತಾನೇ ಶಾಂತಿ ಸಮಾಧಾನ ಕಲ್ಪಿಸಿದನು. ದೇವರನ್ನು ಹುಟ್ಟಿಸಿದುದೇ ಮಾನವನ ಧರ್ಮದ ಅತಿ ಪುರಾತನ ಮೂಲ. ಮನುಷ್ಯನ ಭಯ, ಶಂಕೆ, ಅಕ್ಷೇಮ, ಏಕಾಕಿತ್ವ, ಅಸಹಾಯಕತೆ, ಸಂವೇ ದನೆಯಲ್ಲಿದೆ ದೇವಧರ್ಮಗಳ ಮೂಲ. 'ಧರ್ಮವು ಪ್ರಥಮ

ಹಾಗೂ ಪ್ರಾಮುಖ್ಯವಾಗಿ ಭೀತಿಯ ತಳಹದಿಯ ಮೇಲೆ ಕಟ್ಟಲ್ಪಟ್ಟಿದೆ'ಂದು ಲೋಕಪ್ರಸಿದ್ಧ ತತ್ವಜ್ಞರಾದ ಬರ್ಟ್ರೆಂಡ್ ರಸೆಲರ ಅಭಿಮತ. ಪ್ರಾಚೀನ ಮಾನವನು ಸ್ವೇಚ್ಛಾವರ್ತಿಯಾಗಿದ್ದನು. ಇದರಿಂದ ಸ್ವಪರಘಾತವಾಯಿತು. ಆಗ ಆತನಲ್ಲಿ ಸಂಘ ಜೀವನದ ಆವಶ್ಯಕತೆಯ ತಿಳಿವುಂಟಾಯಿತು. ಸಂಘ ಜೀವನದಲ್ಲಿ ಸಂಘಕ್ಕೆ ಹಾನಿಕರವಾದ್ವವ್ಯಕ್ತಿಯ ಸ್ವೇಚ್ಛಾಪರತೆಯನ್ನು ತಡೆಗಟ್ಟಲು ಕೆಲವೊಂದು ಕಟ್ಟುಕಟ್ಟಳೆಗಳು ಬೇಕಾದುವು. ಈ ಕಟ್ಟು ಕಟ್ಟಳೆಗಳನ್ನು ಬಲಪಡಿಸುವುದಕ್ಕಾಗಿ ದೇವ, ಮತ, ಶಾಸ್ತ್ರಗಳೆಲ್ಲಾ ಹುಟ್ಟಿದುವು. ಸಂಘಜೀವನಕ್ಕೆ ಅವಶ್ಯವಾದ ನೀತಿನಿಯಮಗಳೆಲ್ಲಾ ಮಾನವ ನಿರ್ಮಿತವೆಂದಾದರೆ ಅವುಗಳನ್ನು ಮಾನವರೇ ಇಚ್ಛಾನುಸಾರ ಮೂಲೆಗೊತ್ತಿ ಉಲ್ಲಂಘಿಸಿಬಿಡಬಹುದು. ಆದುದರಿಂದ ಅವಕ್ಕೆಲ್ಲಾ ಆಧಾರವಾಗಿ ಅದೊಂದು ಅಗೋಚರಶಕ್ತಿಯ ನಿರ್ಮಾಣವಾಗಬೇಕಾಯಿತು. ವ್ಯಕ್ತಿ, ಸಂಘಗಳಿಗೆ ಪೂಜ್ಯವಾದ, ಆವಶ್ಯಕವಾದ ಸಕಲ ಶಕ್ತಿಗಳನ್ನೂ ಆ ದೇವರಲ್ಲಿ ಮಾನವಕಲ್ಪನೆಯು ಮಿತಿಮೀರಿ ಹೊಂದಿಸಿಬಿಟ್ಟಿತು. ದುಷ್ಟ ಶಿಷ್ಟರ ಶಿಕ್ಷೆ ರಕ್ಷೆಯ ಅಧಿಕಾರವೆಲ್ಲಾ ಈ ದೇವರದಾಯಿತು. ಈ ಅಧಿಕಾರ ಚಾಲನೆಗಾಗಿ ಸ್ವರ್ಗ ನರಕ ಪಾಪಪುಣ್ಯಗಳ ಸೃಷ್ಟನೆಯಾಯಿತು. ಹೀಗೆ ವ್ಯಕ್ತಿ, ಪಂಗಡಗಳು ನಾಶವಾಗದಂತೆ ಏನಾದರೊಂದು ವ್ಯವಸ್ಥೆ ಮಾಡಬೇಕೆಂದು ತೋರಿತು. ಮಾನವನ ಈ ಎಚ್ಚರಿಕೆಯೇ ಧರ್ಮ, ಸಮಾಜ ಮತ್ತು ಕಾಯಿದೆ ಕಟ್ಟಳೆಗಳ ಮೂಲ. ಧರ್ಮವು ನೈಸರ್ಗಿಕವಲ್ಲ. ದೇವರು ಕೊಟ್ಟಿದ್ದೂ ಅಲ್ಲ, ಹೇಳಿಕೊಟ್ಟಿದ್ದೂ ಅಲ್ಲ. ವ್ಯಕ್ತಿ ಸಮಾಜಗಳ ಪರಸ್ಪರ ಹಿತಕ್ಕಾಗಿ ಮಾನವನೇ ನೇಮಿಸಿದ ಉಪಾಯಗಳು. ಬರಬರುತ್ತಾ ಅವವನ್ನು ಮಾನವನು ಭಯಭಕ್ತಿಯಿಂದ ಅನುಸರಿಸುವಂತೆ ಅವು ದೇವರಿಂದ ಬಂದುವೆಂಬ ಕಲ್ಪನೆಯಾಯಿತು. ಪ್ರತಿಯೊಂದು ಧರ್ಮದ

ಹುಟ್ಟನ್ನು ವಿಮರ್ಶಕ ಬುದ್ಧಿಯಿಂದ ವಿಚಾರಿಸಿದರೆ ವೇದ್ಯವಾಗುವ ವಿಷಯಗಳಿವು. ಮೋಸೆಯ ೧೦ ಕಟ್ಟಳೆಗಳು ಕೇವಲ ಸರಳ ನೀತಿ ನಿಯಮಗಳು. ಆದರೆ ಆತನು ಸೀನಾಯಿ ಪರ್ವತದ ತುತ್ತ ತುದಿಗೇರಿ ಬಹಳ ಕಷ್ಟಪಟ್ಟು ಕಲ್ಲಿನ ಹಲಿಗೆಗಳೆಲ್ಲವನ್ನು ಕೊರೆದು, ಅಗ್ನಿಸ್ವರೂಪಿ ಭಯಂಕರ ದೇವರವನ್ನು ತನಗಿತ್ತನೆಂದು ಹೇಳದಿದ್ದರೆ ಸ್ವೇಚ್ಛಾಚಾರಿಗಳಾದ ಆತನ ಜನರವನ್ನು ಎಂದೂ ಅನುಸರಿಸುತ್ತಿದ್ದಿಲ್ಲ. ಹೀಗೆಯೇ ವೇದಗಳ, 'ಮಾತೃದೇವೋಭವ, ಪಿತೃದೇವೋಭವ, ಆಚಾರ್ಯ ದೇವೋಭವಾದಿ' ಪವಿತ್ರವೆನಿಸುವ ಮಂತ್ರಗಳು ಕೇವಲ ಸರಳ ನೀತಿ ನಿಯಮಗಳಲ್ಲದೆ ಮತ್ತೇನು? ದೇವರನ್ನು ನಾಗರಿಕತೆಯು ಹುಟ್ಟಿಸಿರುವುದು. ಆತನಿಂದದು ಸಮಾಧಾನ ಹೊಂದಿರುವುದು. ದೇವ ಧರ್ಮ ಸ್ವರ್ಗ ಮುಂತಾದುವು ಬಲವಾದ ವಿಚಾರವಿಲ್ಲದ, ಸದಾ ಪರಾವಲಂಬಿ ಮನಸ್ಸಿಗೆ ಸಮಾಧಾನ ಕೊಡಬಲ್ಲವಷ್ಟೆ. ದೇವರು ಮತ್ತು ಧರ್ಮವೆಂದರೆ ಅದೊಂದು ವಿಮೆ ಇದ್ದಂತೆಂದು ಪಂಡಿತ ತಾರಾನಾಥರು ಹೇಳಿರುವರು. 'ಧರ್ಮವು ಕೆಲಮಟ್ಟಿಗೆ ಅಜ್ಞಾತ ಭಯದಿಂದಲೂ, ಇನ್ನು ಕೆಲಮಟ್ಟಿಗೆ ತನ್ನ ಹೋರಾಟ ಸಂಕಷ್ಟಗಳಲ್ಲೆಲ್ಲಾ ಕರುಣೆಯಿಂದ ತನಗೆ ಸದಾ ನೆರವಾಗಿ ನಿಲ್ಲುವ ಹಿರಿಯಣ್ಣನೋರ್ವನಿರುವನೆಂಬ ಮಾನವನ ಅಭಯುದ ಅಪೇಕ್ಷೆಯಿಂದಲೂ ಉಂಟಾಯಿತು. ಸೃಷ್ಟಿವೈಚಿತ್ರ್ಯ, ಅಪಜಯ, ಮರಣಗಳ ಕುರಿತಾದ ಮಾನವನ ಭೀತಿಯೇ ಧರ್ಮದ ತಳಹದಿಯೆಂದು ಬರ್ಟ್ರೆಂಡ್ ರಸ್ಸೆಲರ ಅಭಿಮತ.

## ಭೀಕರ ಸ್ವರೂಪಿ ದೇವರು.

ಪ್ರಾಚೀನ ಮಾನವನು ಕ್ರೂರ ಬರ್ಬರನಾಗಿದ್ದಾಗ ಅಂದಿನ ದೇವರು ಕೂಡಾ ಭಯಂಕರ ಸ್ವರೂಪಿಯಾಗಿ ನಿರಂಕುಶಿಯೂ ಕ್ರೂರಿಯೂ ಇದ್ದನು. ಒಬ್ಬೊಬ್ಬ ಪ್ರವಾದಿ,

ಅದೊಂದು ಪಂಗಡ, ಜಾತಿಗಳವರ ಪಕ್ಷಪಾತಿಯಿದ್ದನು. ಅಂದರೆ ಪ್ರಾಚೀನ ಪಂಗಡಿಗರು, ತಮ್ಮಲ್ಲಿ ಜ್ಞಾನಿಗಳು, ಬುದ್ಧಿ ಶಾಲಿಗಳು ಮಾಡಿದ ಕಟ್ಟುಕಟ್ಟಳೆಗಳನ್ನನುಸರಿಸಿ, ಅವುಗಳಿಗೆ ಆಧಾರವಾಗಿ ದೇವಧರ್ಮಗಳನ್ನು ರಚಿಸಿ ಇತರರಿಗಿಂತ ನಾಗರಿಕತೆಯಲ್ಲಿ ಮುಂದುವರಿದಂತೆ, ಬುದ್ಧಿ ವಿಕಾಸವಾದಂತೆ ಅವರಲ್ಲೊಂದು ಶ್ರೇಷ್ಠತೆಯ ಅಭಿಮಾನವುಂಟಾಯಿತು. ತಾವು ದೇವರಿಂದ ಆರಿಸಲ್ಪಟ್ಟ ಜನಾಂಗವೆಂಬಂತೆಯೂ ಆಯಿತು. ತಮ್ಮ ಕಟ್ಟುಕಟ್ಟಳೆಗಳಿಗೊಪ್ಪದೆ ಇಚ್ಛಾನುಸಾರ ನಡೆದು ತಮಗೆ ಪೀಡೆ ಕೊಡುವವರನ್ನು ತಮ್ಮ ದೇವರು ಭಯಂಕರವಾಗಿ ಹಿಂಸಿಸುವನೆಂದಾಯಿತು. ಈ ಶ್ರೇಷ್ಠತಾಭಾವನೆಯೇ ಈಗಣ ಹಿಂದು, ಕ್ರೈಸ್ತ, ಮುಸಲ್ಮಾನ ಧರ್ಮಾಭಿಮಾನದ ಮೂಲ. ಆರಿಸಲ್ಪಟ್ಟ ಜನಾಂಗವಾದ ಇಸ್ರಯೇಲರ ದೇವರು, ಅವರ ಕಟ್ಟುಕಟ್ಟಳೆಗೊಪ್ಪದೆ ಅವರನ್ನು ಹಿಂಸಿಸಿದವರಿಗೆ ಮಾಡಿದ ಹಾವಳಿಯಾದರೂ ಎಷ್ಟು! ಆರ್ಯರ ದೇವರು, ಅನಾರ್ಯ ದಸ್ಯುಗಳಿಗೆ ಎಂತಹ ಹಾನಿಯನ್ನುಂಟುಮಾಡಿದ್ದ! ಈ ಭಾವನೆಯೇ ಬೆಳೆಯುತ್ತಾ ಈಗಣ 'ಮ್ಲೇಂಛ' 'ಕಾಫರ', 'ಹೀದನ್' ಮೊದಲಾದ ಭೇದಗಳನ್ನುಂಟುಮಾಡಿತು. ಈ ತುಚ್ಛ ಭೇದಗಳಿಂದ ಈಗಲೂ ಲೋಕದಲ್ಲಾಗುವ ಹಾವಳಿಯಾದರೂ ಎಷ್ಟು! ಮಾನವ ಬಾಂಧವ್ಯಕ್ಕೆ ಅವೆಷ್ಟು ತೊಡಕಾಗಿರುವುವು! ಅದೊಂದು ದೇವಧರ್ಮದ ಮೂಲಕವೇ ರಕ್ಷಣೆ, ಮುಕ್ತಿಯೆಂಬ ಅಭಿಮಾನಾಭಿಭೂತ ಮಾನವನು ಅದೆಂತಹ ಪೈಶಾಚಿಕ ಕೃತ್ಯ ನಡಿಸಿಲ್ಲ! ಈಗಲೂ ನಡಿಸುತ್ತಿರುವುದಿಲ್ಲ! ಹಿಂದುದೇಶದ ಹಿಂದು ಮುಸಲ್ಮಾನ ಗಲಾಟೆಗಳೂ, ಇತ್ತಲಾಗಿ ಅಯರ್ಲೆಂಡಿನ ಬೆಲ್ ಫಾಸ್ಟಿನಲ್ಲಿ ಕ್ರೈಸ್ತ ಪಂಗಡಿಗರೊಳಗೇನೇ ನಡೆದ ಭೀಕರ ಹೋರಾಟವೂ ಚಿತ್ತವೇಧಕವಾಗಿ ಇದನ್ನು ವ್ಯಕ್ತಪಡಿಸುವುದಿಲ್ಲವೇ? ದೇವಧರ್ಮಗಳ ಹೆಸರಲ್ಲಿ ಮಾನವ ಮಾನವರೊಳಗೆ ಎಷ್ಟೊಂದು

ಘೋರ ಯುದ್ಧ, ಹೋರಾಟಗಳಾಗಿಲ್ಲ! 'ರಿಲಿಜಿಯಸ್ ಕ್ರುಸೇಡ್ಸ್', ಸ್ಪೆನಿಶ್ ಇಂಕ್ವಿಶಿಶನ್, ಮುಸಲ್ಮಾನ ಮತಪ್ರಚಾರ ಹಿಂಸೆಗಳೆಲ್ಲಾ ದೇವರ ಧರ್ಮಗಳ ಹೆಸರಲ್ಲಿ ನಡೆದ ಘೋರ ಅನ್ಯಾಯಗಳು! ಈಗ ನಮ್ಮ ಮನೋವೃತ್ತಿಯು ಸ್ವಲ್ಪ ಉದಾರವಾಗಿದೆಯಾದರೂ ನಾವು ಇಂದೂ ಅದೇ ದಾರಿ ಹಿಡಿದೇ ಹೋಗುತ್ತಿದ್ದೇವೆ. ಕಳೆದ ಜರ್ಮನಿಯ ಯುದ್ಧದಲ್ಲಿ, ಜರ್ಮನಿಯ ದೇವಧರ್ಮಗಳು ಹೇಗಿದ್ದರೂ, ಲೋಕದ ಇತರ ದೇವಧರ್ಮಗಳು ಮಿತ್ರ ರಾಷ್ಟ್ರಗಳಿಗೆ ಸಹಾಯಕವಾಗಿ ಆ ಘೋರ ನರಯಜ್ಞಕ್ಕೆ ಧರ್ಮಯುದ್ಧವೆಂಬ ಬಣ್ಣ ಕೊಡಲಿಲ್ಲವೇ? ಇಂದೀಗ ಇಟೆಲಿಯ ದೇವಧರ್ಮಗಳು ಅಬಿಸೀನಿಯದ ಮೇಲಿನ ಮದೋನ್ಮತ್ತ ಇಟೆಲಿಯ ಧಾಳಿಗೆ ನೆರವಾಗಿ ನಿಂತಿರುವುದಿಲ್ಲವೇ? ಇಟೆಲಿಯ ಚರ್ಚ್‌ಗಳ ಚಿನ್ನವು ಮುಸಲೋನಿಯ ಪೈಶಾಚಿಕ ಯುದ್ಧವೆಚ್ಚಕ್ಕಾಗಿ ಕೊಡಲ್ಪಡುವುದಿಲ್ಲವೇ?

## ಧರ್ಮದ ಮುಸುಕಿನಲ್ಲಿ ತುಚ್ಛ ಸ್ವಾರ್ಥ ಸಾಧನೆ.

ಮಾನವನು ಪ್ರಗತಿ ಹೊಂದುತ್ತಾ ಹೋದಂತೆ ದೇವಧರ್ಮ ವಿಷಯಕವಾದ ಅವನ ಭಾವನೆಯಲ್ಲಿಯೂ ಪ್ರಗತಿಯುಂಟಾಯಿತು. ಜನರ ಅವಸರಾವಶ್ಯಕತೆಗಳು ಬದಲಾದಂತೆ ಅವನ್ನು ಪೂರೈಸಲು ದೇವರ ವ್ಯಾಖ್ಯೆಯೂ, ರಚನೆಯೂ, ಧರ್ಮದ ಉಪದೇಶವೂ ಮಾರ್ಪಡುತ್ತಾ ಹೋದುದನ್ನು ಇತಿಹಾಸದಲ್ಲಿ ನಾವು ಸ್ಪಷ್ಟವಾಗಿ ಕಾಣಬಹುದು. ಪ್ರಾಚೀನ ಕಾಲದಲ್ಲಿ ಪ್ರಕೃತಿಯ ಅವಸರ, ಆವಶ್ಯಕತೆಗಳಿಂದುಂಟಾದ ಧರ್ಮವು ಆ ಕಾಲದ ಸ್ಥಿತಿಗತಿ, ಜ್ಞಾನ ಪರಿಮಿತಿಗಳಿಗನುಸರಿಸಿ ಜೀವಿತವನ್ನು ಚೆನ್ನಾಗಿ ಸಾಂಗೋಪಾಂಗವಾಗಿ ನಡೆಸಲು ಅಗತ್ಯವಿತ್ತು. ಅದರಲ್ಲಿ ಅಜ್ಞಾನವು ತುಂಬಿದ್ದಿತು. ಆದರೆ ಸ್ವಾರ್ಥವಿರಲಿಲ್ಲ; ದುರಭಿಲಾಶೆಯಿರಲಿಲ್ಲ. ಅನಂತರದ ಧರ್ಮಕ್ಕೆ

ಸ್ವಾರ್ಥ ದುರಭಿಲಾಷೆಯೇ ಮೂಲ. ಪ್ರಕೃತಿಜನ್ಯ ಧರ್ಮದ ಅಜ್ಞಾತ ದೋಷಗಳನ್ನು ತಿದ್ದುವ ಬದಲಿಗೆ, ದೇವಧರ್ಮಗಳ ಹಿಡಿತವು ಸಂಘದ ಮೇಲೆ ಚೆನ್ನಾಗಿರುವುದನ್ನು ಕಂಡು ಕೆಲ ಮಂದಿ ಸ್ವಾರ್ಥಿಗಳು, ದುರಭಿಲಾಶಿಗಳು, ಮಾನ ಸತ್ಕಾರ ಪ್ರಿಯರು, ಅವುಗಳ ಹೆಸರಲ್ಲಿ, ಅವುಗಳ ಮುಸುಕಿನಲ್ಲಿ ತಮ್ಮ ಇಂದ್ರಜಾಲ ನಡೆಸತೊಡಗಿದರು. ಇನ್ನೂ ಹೆಚ್ಚಿನ ದುರ್ದೈವವೆಂದರೆ ಇವರ ನಂತರ ಬಂದ ಪ್ರವಾದಿ, ಧರ್ಮಾಚಾರ್ಯರೆನಿಸುವವರೆಲ್ಲಾ, ಕುರುಡು ನಂಬಿಕೆಯಿಂದಲೋ ಕ್ಷುದ್ರ ಸಂಘ ಸ್ವಾರ್ಥದಿಂದಲೋ ಈ ಸಂಘ ವಿನಾಶಕ ಸೂತ್ರಗಳನ್ನುಸಮರ್ಥಿಸಿ ಅವುಗಳಿಗೆ ಟೀಕೆ ಭಾಷ್ಯಗಳನ್ನು ಬರೆದು ಸರಿಪಡಿಸಿದುದು.

ಆಧುನಿಕ ಕನ್ನಡ ಕವಿಗಳಲ್ಲಿ ಸುಪ್ರಸಿದ್ಧರಾದ ಶ್ರೀ। ಪುಟ್ಟಪ್ಪನವರು ಒಂದು ಪದ್ಯದಲ್ಲಿ ಈ ರೀತಿ ಬರೆದಿರುವರು.

ಭಕ್ತಿಯ ಹೆಸರನು ಧರಿಸುತೆ ಮೆರೆವ ಚಿತ್ತದ ದಾಸ್ಯ,
ದೇವರ ಗುಡಿಯೆಂಬುವ ಸೆರೆಯಲ್ಲಿ
ಸ್ವಾತಂತ್ರ್ಯದ ಶವ ಸಂಸ್ಕಾರದ ಪರದೆಯ ಮರೆಯಲ್ಲಿ
ಪೂಜೆಯು ನಕಲಿಯ ಪರಿಹಾಸ್ಯ.
ಶಾಸ್ತ್ರದ ಆಚಾರದ ಧರ್ಮದ ಕಬ್ಬಿಣನೇಣು,
ಸಿಲುಕಿಹುದದರಲಿ ಮಾನವನಮೃತಾತ್ಮದ ಗೋಣು

ಪ್ರಾಚೀನ ಮಾನವನು ವ್ಯಕ್ತಿ ಸಮಾಜ ಹಿತಕ್ಕೆಂದು ಕಲ್ಪಿಸಿದ ದೇವಧರ್ಮಗಳು, ಕಾಲ ಪರಿಸ್ಥಿತಿಯು ಬದಲಾದಂತೆ ಪ್ರಗತಿ ಹೊಂದಿ, ಮಾರ್ಪಾಟಗೊಂಡು ಆಯಾ ಕಾಲದ ಸಮಾಜಕ್ಕೆ ಹಿತಕಾರಕವಾಗುವ ಬದಲಿಗೆ ಸ್ವಾರ್ಥಪರರ ವಶಕ್ಕೆ ಸಿಲುಕಿ ಅಹಿತವನ್ನುಂಟುಮಾಡಿದುವು. ಈ ಸ್ವಾರ್ಥಕ್ಕೆ ವಿಚಾರಿ ಜನರಿಂದ ಧಕ್ಕೆಯುಂಟಾಗದಂತೆ ನಾನಾ ಭ್ರಾಮಕ ಕಲ್ಪನೆ, ಮಾಯಾ ಜಾಲವನ್ನು ಸಮಾಜದ ಮೇಲೊಡ್ಡಲಾಯಿತು.

ವಂಶಪರಂಪರೆಯ ಧರ್ಮಾಧಿಕಾರಿಗಳುಂಟಾದರು. ದೇವರು ಸೈತಾನ, ಪುಣ್ಯಪಾಪ, ಸ್ವರ್ಗನರಕಗಳ ನಡುವೆ ಮಧ್ಯಸ್ತಿಕೆ ಮಾಡಲು ಅರ್ಚಕರು, ಪುರೋಹಿತರು, ಪಾದ್ರಿಗಳು, ಮುಲ್ಲ ರೆಲ್ಲಾ ಹುಟ್ಟಿದರು. ಸಮಾಜದಲ್ಲಿ ಹತ್ತು ಹಲವು ಭೇದ ಗಳುಂಟಾಗಿ ಅದು ಭಿನ್ನಭಿನ್ನವಾಗಿ ಒಡೆದು ಹೋಯಿತು. ಇದೆಲ್ಲಾ ಒಬ್ಬೊಬ್ಬ ದೇವರು ಮತ್ತು ಒಂದೊಂದು ಧರ್ಮದ ಹೆಸರಲ್ಲಿಯೇ ನಡೆದುದೆಂದಾಯಿತು. ಹಿಂದು ಸಮಾಜದಲ್ಲಿ ಬ್ರಾಹ್ಮಣರುಂಟಾದರು. ಅವರು ಭೂಸುರರಾದರು. ಕೆಲವು ವೇಳೆ ಈ ಭೂಸುರರು ಸ್ವರ್ಗದ ದೇವತೆಗಳಿಗಿಂತಲೂ ಹೆಚ್ಚಿನ ವರು. ವಿಷ್ಣುವನ್ನು ಮೆಟ್ಟುವ, ಈಶ್ವರನನ್ನು ಶಪಿಸುವ, ಬ್ರಹ್ಮ ನನ್ನು ಧಿಕ್ಕರಿಸುವ, ಇಂದ್ರನನ್ನು ಮೂಲೆಗೊತ್ತುವ ಅಧಿಕಾರವೂ ಅವರಿಗಿರುವುದು. ಸಮಾಜದಲ್ಲಿ ಅವರೇ ಪೂಜ್ಯರು! ಇತರ ರೆಲ್ಲಾ ಅವರ ಸೇವೆಮಾಡಬೇಕು! ಸ್ತ್ರೀ ಶೂದ್ರರಿಗಂತೂ ಬ್ರಹ್ಮನ ಬಾಯಿಯಲ್ಲಿ ಹುಟ್ಟಿದ ಬ್ರಾಹ್ಮಣರ ಸೇವೆಯ ಹೊರತು ಬೇರೆ ಧರ್ಮವಿಲ್ಲ! ಅವರು ಬ್ರಾಹ್ಮಣರ ಗುಲಾಮರು. ಅವ ರಿಗೆ ಯಾವ ಸ್ಥಾನಮಾನವೂ ಇಲ್ಲ! ವೇದಾಧಿಕಾರವಿಲ್ಲ! ಬ್ರಹ್ಮನ ಪಾದದಿಂದ ಹುಟ್ಟಿದವರವರು. ನೀಚಯೋನಿಯ ವರು; ಪಾಪಿಗಳು! ಸ್ಮೃತಿಪುರಾಣಗಳ ಮಾತಂತಿರಲಿ, ವೇದ, ಭಗವದ್ಗೀತೆಗಳಲ್ಲಿಯೂ ಈ ಭೇದ ತಪ್ಪಿಲ್ಲ. ಅದ್ವೈತ ಮತಾ ಚಾರ್ಯರಾದ ಶಂಕರಾಚಾರ್ಯರಿಗೂ ಸ್ತ್ರೀ ಶೂದ್ರರು ಪಾಪಿ ಗಳು. ಇದೇ ತರದ ಸ್ವಾರ್ಥಪರ ದುರಾಚಾರವು ಇತರ ಧರ್ಮ ಗಳಲ್ಲಿಯೂ ನಡೆದಿದೆ. ಮುಸಲ್ಮಾನ ಧರ್ಮದಲ್ಲಿ ಗುಲಾಮರ ಅವಸ್ಥೆಯೇನು ! ಕ್ರೈಸ್ತರು ಧರ್ಮದ ಹೆಸರಲ್ಲಿಯೇ ಗುಲಾಮ ವ್ಯಾಪಾರ ನಡಿಸುತ್ತಿದ್ದರು. ದೇವರ ಆಶೀರ್ವಾದ ಪಡೆದು ಗುಲಾಮರನ್ನು ಹಿಡಿಯುತ್ತಿದ್ದರು. ಅತ್ಯಂತ ಧರ್ಮನಿಷ್ಠನೆನಿಸಿ ಕೊಂಡಿದ್ದ ಕ್ರೈಸ್ತನೊಬ್ಬನು ಗುಲಾಮರನ್ನು ಹಿಡಿದೊಯ್ಯುವ

ತನ್ನ ಹಡಗಕ್ಕೆ 'ಜೀಸಸ್' ಎಂಬ ಹೆಸರಿಟ್ಟಿದ್ದನು. ಹೀಗೆ ಧರ್ಮ ದೇವರುಗಳನ್ನು ಜನರು ತಮ್ಮ ಸ್ವಾರ್ಥಸಾಧನೆಗಾಗಿ ಉಪಯೋಗಿಸಿ ನಡೆಸಿದ ಅನಾಚಾರ ಅತ್ಯಾಚಾರಗಳನ್ನೆಲ್ಲಾ ಹೇಳಿತೀರದು! ಅವನ್ನೆಲ್ಲಾ ಅವರವರ ದೇವರು ಕಣ್ಣು ಮುಚ್ಚಿ ಸಹಿಸಿಕೊಂಡು ಅವರಿಗೆ ಬೇಕಾದಂತೆ ಕುಣಿಯುತ್ತಿದ್ದ. ನಮ್ಮ ಸನಾತನಿಗಳ ದೇವರು ಅಸ್ಪೃಶ್ಯತೆಯ ಘೋರ ಪಾಪವನ್ನು ಧರ್ಮದ ಸ್ಥಾನಕ್ಕೇರಿಸಿದ್ದಾನೆ! ಅದನ್ನು ನಿಷೇಧಿಸುವ ಮಹಾತ್ಮರು ಕೂಡಾ ನಾಸ್ತಿಕರು, ದೈವದ್ರೋಹಿಗಳಾಗಿ ಹೋಗಿರುತ್ತಾರೆ.

ಧರ್ಮದೇವರುಗಳ ಹೆಸರಲ್ಲಿ ನಡೆವ ಈ ಕ್ಷುದ್ರಭೇದ, ಅನಾಚಾರ, ಅತ್ಯಾಚಾರಗಳಿಂದೆಲ್ಲಾ ಜುಗುಪ್ಸೆಗೊಂಡು ಅದನ್ನೆಲ್ಲಾ ಖಂಡಿಸಿ ನಿಷೇಧಿಸಿದ ಸ್ವತಂತ್ರ ವಿಚಾರಿಗಳು ಮೊದಲಿನಿಂದಲೂ ಇದ್ದರು. ಸ್ವರ್ಗ, ನರಕ, ದೇವಾಧಿದೇವರಿಗಿಂತಲೂ ಆತ್ಮವೇ ಹೆಚ್ಚಿನದು. ಅಂತಹ ವಿಶಿಷ್ಟ ವಸ್ತುವನ್ನು ಮತ ಗ್ರಂಥಗಳು ಕಾಪಾಡಲಾರವು. ಆತ್ಮದ ಉದ್ಧಾರವು ಆತ್ಮವನ್ನೇ ಸೇರಿದೆ ಎಂದು ವೇದಕಾಲದಲ್ಲೇ ಉದ್ಘೋಷಿಸಿದ ಸ್ವತಂತ್ರ ವಿಚಾರಿಗಳು ಹಲವರಿದ್ದರು. ಅಂತೆಯೇ,

ವೇದ ಪುರಾಣ ಕುರಾಣ ಯಾ ಸಬ್ ಕಹಾನಿ।
ಗಂಗಾ ಜಮುನಾ ತೀರತ ಯಾ ಸಬ್ ಪಾನಿ।
ತೋ ಮತ್ ಹೋ ಇನಕಾ ಅಭಿಮಾನಿ।
ಯಾ ಸಬ್ ಚೋಡ್ ಹೋ ಆತ್ಮಗ್ಯಾನಿ।

ವೇದ ಪುರಾಣ ಕುರಾನ್‌ಗಳೆಲ್ಲಾ ಬರಿಯ ಹೇಳಿಕೆಗಳು. ಗಂಗಾ ಯಮುನಾ ತೀರ್ಥಗಳೆಲ್ಲಾ ಬರೇ ನೀರು. ಆದುದರಿಂದ ಅವುಗಳಲ್ಲಿ ಅಭಿಮಾನ ಪಡದೆ ಆತ್ಮಜ್ಞಾನವುಳ್ಳವನಾಗೆಂದು ಸಾರಿದ ಮಧ್ಯ ಕಾಲೀನರೂ ಇದ್ದಾರೆ. ಈಗಲೂ ಎಲ್ಲೆಲ್ಲಿಯೂ ಈ ಸ್ವತಂತ್ರ ವಿಚಾರ ನಡೆದಿದೆ. ಹಿಂದಿನ ಹಿಂದು ಶಾಸ್ತ್ರದ ಷಡ್ದರ್ಶನ

ಗಳಲ್ಲಿ ಪ್ರಾಮುಖ್ಯವಾದ ಸಾಂಖ್ಯಶಾಸ್ತ್ರದಲ್ಲಿಯೇ ಕಪಿಲಮಹರ್ಷಿಯು ದೇವರನ್ನೂ, ಆತನನ್ನು ಹುಟ್ಟಿಸಿದ ವೇದಗಳನ್ನೂ ತಿರಸ್ಕರಿಸಿಬಿಟ್ಟಿರುವನು. ಅವುಗಳ ಸುರಾಪಾನ, ಪಶುಬಲಿ, ಹಿಂಸೆಗಳಿಗಾಗಿ ಕಪಿಲನು ಅವನ್ನು ದೂರವೇ ಬಿಟ್ಟನು. ಆದರೂ ಕಪಿಲನು ಮಹರ್ಷಿಯಾಗಿ ಹೋಗಿದ್ದಾನೆ. ನಾಸ್ತಿಕನಲ್ಲ, ಅಸುರನಲ್ಲ, ಧರ್ಮದ್ರೋಹಿಯಲ್ಲ. ಸಕಲ ಅಧ್ಯಾತ್ಮ ಧ್ಯಾನ ವಿಧಾನಗಳಿಗೂ ಆತನ ಸಾಂಖ್ಯ ಶಾಸ್ತ್ರವೇ ಮೂಲವೆಂದರೂ ಅತಿಶಯೋಕ್ತಿಯಾಗದು. ಮಹಾತ್ಮ ಬುದ್ಧನು ವೈದಿಕ ವರ್ಣಾಶ್ರಮ ಧರ್ಮದ ಭಿನ್ನ ಭೇದಗಳ ವೈರಿಯಾಗಿ, ಸಮಾನ ಪ್ರೇಮ, ಅಹಿಂಸೆಯ ಸಂದೇಶಕನಾಗಿ ಬಂದು ಕೃತ್ರಿಮ ಜಾತಿರೀತಿಗಳನ್ನು ಒಡೆದುಹಾಕಿದನು. ಆದರೆ ಈಗ ಅವತಾರಿಗಳಲ್ಲೊಬ್ಬನಾಗಿರುವ ಬುದ್ಧನು ದೇವರನ್ನೇ ಬಹಿಷ್ಕರಿಸಿಬಿಟ್ಟಿರುವನು. ಆಗ ಹಿಂದು ದೇಶದಲ್ಲೊಂದು ಹೊಸ ಯುಗವಾರಂಭವಾಯಿತು. ಅಲೆಗ್ಝಾಂಡರ್, ಮೆಗಸ್ತೆನೆಸ್, ಪಾಹಿಯಾನ್ ಮೊದಲಾದವರೆಲ್ಲಾ ಬಹಳವಾಗಿ ಹೊಗಳಿದ ಕ್ರಿಸ್ತಪೂರ್ವದ ಆ ನಮ್ಮ ನವಸಂಸ್ಕೃತಿ ಪ್ರಭಾವವು ನಾಸ್ತಿಕ ಸಂಪ್ರದಾಯದ ಧರ್ಮದಿಂದುದ್ಭವವಾದುದು. ಜೈನರು ಶುದ್ಧ ನಿರೀಶ್ವರವಾದಿಗಳು. ಅಹಂಬ್ರಹ್ಮಾಸ್ಮಿ ಎಂಬ ಅದ್ವೈತವಾದವು ಮನುಷ್ಯನೇ ದೇವರೆಂದು ಸಾಧಿಸುವುದರಿಂದ, ನಿರೀಶ್ವರವಾದಕ್ಕೂ ಅದಕ್ಕೂ ಹೆಚ್ಚುಕಡಿಮೆಯೇನೂ ತೋರುವುದಿಲ್ಲ.

ಇದೀಗ ಭೌತಿಕ ವಿಜ್ಞಾನಯುಗ. ಪ್ರಾಚೀನ ಮತ್ತು ಮಧ್ಯಕಾಲದ ದೇವ ಧರ್ಮಗಳ ಎಷ್ಟೋ ಅಜ್ಞಾನ, ಅವಿಚಾರಗಳನ್ನು ವಿಜ್ಞಾನ, ವಿಚಾರವು ಈಗ ತೊಡೆದುಹಾಕಿದೆ. ಎಲ್ಲವನ್ನೂ ಶೋಧಿಸಿ, ಪರೀಕ್ಷಿಸಿ, ಕಾರಣಗಳನ್ನು ಕಂಡುಕೊಳ್ಳುವ ಕಾಲವಿದು. ದೇವರು ಧರ್ಮಗಳನ್ನಾದರೂ ಅದು ಹಾಗೆಯೇ

ಬಿಡಲಾರದು. ವನಸ್ಪತಿಗಳ ಜೀವನ ರಹಸ್ಯವನ್ನು ಇತ್ತಲಾಗಿನ ಒಂದು ಶೋಧದಿಂದ ಕಂಡುಕೊಳ್ಳಲಾಗಿದೆಯಂತೆ. ಅಂತೆಯೇ ಮಾನವ ಜೀವನ ರಹಸ್ಯದ ಶೋಧವಾಯಿತೆಂದರೆ ನಮ್ಮ ದೇವ ಧರ್ಮಗಳ ಬಾಬೆಲ್ ಗೋಪುರವು ಒಮ್ಮೆಯೇ ಕುಸಿದು ಬೀಳುವುದು. ಅದು ಸಾಧ್ಯವೇ ಎಂಬುದೊಂದು ಶಂಕೆ. ಅದು ಸಾಧ್ಯವಿಲ್ಲೆಂದು ಲೋಕ ಪ್ರಸಿದ್ಧ ವೈಜ್ಞಾನಿಕರಾದ ಎಡ್ಡಿಸನರು ಹೇಳಿರುವರು. ಆದರೆ ಇಂದು ಅಸಾಧ್ಯವಾದುದು ನಾಳೆ ಸಾಧ್ಯವಾಗಬಹುದು. ಎಡ್ಡಿಸನರಲ್ಲಿಯಾದರೂ ನೀತಿ ಸತ್ಯವೆ ಮೊದಲಾದ ಸಾಮಾನ್ಯ ಧರ್ಮವಲ್ಲದೆ ಮತ್ತಾವ ಧರ್ಮ ಭಾವನೆಯೂ ಇದ್ದಿಲ್ಲ. ಅವರು ರೂಢಿಯ ಆಸ್ತಿಕರಾಗಿರಲಿಲ್ಲ. ಕ್ರೈಸ್ತ ಧರ್ಮವನ್ನವರು ನಂಬುತ್ತಿದ್ದಿಲ್ಲ. ದೇವರು ಎಂಬ ಶಬ್ದದಿಂದ ತನಗೇನೂ ಅರ್ಥವಾಗುವುದಿಲ್ಲ. ಆದರೆ ಜಗತ್ತಿನಲ್ಲಿ ಅತಿ ಶ್ರೇಷ್ಠ ಜ್ಞಾನವೊಂದಿರುವಂತೆ ತೋರುತ್ತಿದೆಯೆಂದು ಮಾತ್ರ ಹೇಳಿದ್ದರು. ಮನುಷ್ಯನೊಂದು ಸ್ವತಂತ್ರ ಜೀವಿಯಲ್ಲ. ಅವನು ಕೋಟ್ಯಾನುಕೋಟಿ ಜೀವಾಣುಗಳ ಗುಂಪು. ಅವನು ಸತ್ತ ಬಳಿಕ ಜೀವಾಣುಗಳು ಶರೀರವನ್ನು ಬಿಟ್ಟು ಹೋಗುವವು. ಅನುಕೂಲ ಪರಿಸ್ಥಿತಿಯಲ್ಲಿ ಅವು ಬೇರೊಂದು ಶರೀರವನ್ನು ಸೇರುವವು. ಈ ಜೀವಾಣು ತಂಡವು ಚಿರಂಜೀವಿಯೆಂದು ಹೇಳಬಹುದೆಂದು ಎಡ್ಡಿಸನರ ಅಭಿಮತ. ಆದರೆ ಇನ್ನು ಮುಂದಿನ ಮಾನವ ಶೋಧದ ಪರಿಣಾಮವೆಲ್ಲಿ ನಿಲ್ಲುವುದೆಂದು ಹೇಳಬರುವುದೇ? ಇತ್ತಲಾಗಿ ನಾಯಿಯೇ ಮೊದಲಾದ ಪ್ರಾಣಿಗಳಿಗೆ ವಿಷಕೊಟ್ಟು ಕೊಂದು ಅನಂತರ ಬದುಕಿಸುವ ಶೋಧವು ಕೆಲಮಟ್ಟಿಗೆ ಜಯಶೀಲವಾಗಿ ನಡೆಸಲ್ಪಟ್ಟಿರುವುದು. ಅಂದ ಮೇಲೆ ಮಾನವ ಜೀವನರಹಸ್ಯವನ್ನು ಕಂಡುಹಿಡಿಯಲು ಸಾಧ್ಯವೇ ಇಲ್ಲೆಂದು ಹೇಳಲಾಗುತ್ತದೆಯೇ?

## ಪ್ರೇಮಮಯ ದೇವರು.

ಮಾನವನು ಅನಾಗರಿಕನಾಗಿ, ಬರ್ಬರನಾಗಿ, ಸ್ವೇಚ್ಛಾಚಾರಿಯಾಗಿದ್ದಾಗ ದೇವರು ಭೀಕರನಿದ್ದನು. ಸಿಡಿಲ್ಮಿಂಚು ಮೊದಲಾದ ಪ್ರಕೃತಿಯ ಭಯಂಕರ ವಿದ್ಯಮಾನಗಳೆಲ್ಲಾತನ ಆವಿಷ್ಕಾರವಾಗುತ್ತಿತ್ತು. ಆಮೇಲೆ ಮಾನವನು ನಾಗರಿಕನಾಗುತ್ತಾ ಹೆಚ್ಚು ಸಂಘಜೀವಿಯಾಗುತ್ತಾ ಹೋದಂತೆ ದೇವರೂ ಸಂಘ ನೀತಿ ನಿಯಮ ಪಾಲಕನಾದನು. ಸರ್ವ ಶಿಕ್ಷೆ ರಕ್ಷೆಗಳ ಕರ್ತನೇ ಆತನಾದನು. ಒಂದು ಮಾತಿನಲ್ಲಿ ಹೇಳುವುದಾದರೆ, ಈಗಣ ಸುವ್ಯವಸ್ಥಿತ ಸರಕಾರಗಳ ಸ್ಥಾನಮಾನವನ್ನು ಆಗ ದೇವ ಧರ್ಮಗಳು ಪಡೆದಿದ್ದುವು. ಸಮಾಜದ ಸರ್ವ ಜವಾಬ್ದಾರಿಯೂ ಅವುಗಳದ್ದಾಗಿದ್ದಿತು. ಆದರೆ ಇಂದೀಗ ಸುಸಂಘಟಿತ ಸರಕಾರಗಳು, ಸಾಮಾಜಿಕ ಶಾಂತಿ ಸುಭದ್ರತೆಯ ಜವಾಬ್ದಾರಿಯನ್ನೆಲ್ಲಾ ಹೊತ್ತು, ದೇವ ಧರ್ಮಗಳನ್ನು ತಳ್ಳಿಹಾಕಿ ಅವುಗಳ ಸ್ಥಾನವನ್ನಾಕ್ರಮಿಸಿರುವವು. ಮಾನವನು ನಾಗರಿಕನಾಗಿ ಸಂಸ್ಕೃತನಾಗಿ ಮುಂದುವರಿದಾಗ, ವಿಜ್ಞಾನ ಶೋಧಗಳು ಧರ್ಮದ ಭ್ರಾಮಕ ಭಾವನೆಗಳ ಮುಸುಕನ್ನು ಹರಿದೊಗೆದಾಗ ಪೂರ್ವದ ಬರ್ಬರ, ಕ್ರೂರ ಮತ್ತು ಪಕ್ಷಪಾತಿ ದೇವರ ಸಂಕುಚಿತ ಕಲ್ಪನೆಯು ಅವನಿಗೆ ವಿಕಟವಾಗಿ ತೋರಿತು. ಆದುದರಿಂದ ಅವನು, ದೇವರು ಪ್ರೇಮಮಯನು, ಸರ್ವಶಕ್ತನು, ನಿಷ್ಪಕ್ಷಪಾತಿಯು, ವಿಶ್ವವ್ಯಾಪಿಯು ಎಂದೆಲ್ಲಾ ಮಾನವಾತೀತ ಹಾಗೂ ವಿಜ್ಞಾನದ ಧಾಳಿಗೆ ಸಿಕ್ಕದ ಗುಣಗಳನ್ನು ಆತನಿಗೆ ಕಲ್ಪಿಸಿ ಅದೊಂದು ಗಗನಗೋಪುರವನ್ನೇ ರಚಿಸಿಬಿಟ್ಟಿರುವನು. ಮಾನವ ಕಲ್ಪನಾಚಾತುರ್ಯದ ಪರಮಾವಧಿಯನ್ನೂ, ಗಂಭೀರ ವೈಚಿತ್ರ್ಯವನ್ನೂ ಈ ದೇವರ ವ್ಯಾಖ್ಯೆಯಲ್ಲಿ ಕಾಣಬಹುದು. ಈಗಲೂ ಸದಾ ಇಂತಹ ಕಲ್ಪನಾ ಗೋಪುರಗಳಲ್ಲಿ ವಿಹರಿಸುತ್ತಾ

ತನ್ಮಯರಾಗಿ ಹೋಗಿರುವ ದೊಡ್ಡ ದೊಡ್ಡ ತತ್ವಜ್ಞಾನಿಗಳೇನೂ ನಮ್ಮಲ್ಲಿ ಕಡಿಮೆಯಿಲ್ಲ. ಹಲವು ತತ್ವಜ್ಞಾನಿಗಳು ಈ ರೀತಿಯ ಕಲ್ಪನಾಸಾಮ್ರಾಜ್ಯದಲ್ಲಿ ವಿಹರಿಸುವುದರಲ್ಲೇ ನಿರತರಾಗಿ ದೇವರ ಭಾವಿಕ ಆರಾಧನೆ ನಡಿಸುವಾಗ, ಜನಸಾಮಾನ್ಯರು ದೇಗುಲ ಗಳ ಕಲ್ಲಿನ ಮೂರ್ತಿಗಳ ಮೇಲೆ ನಾನಾ ಕಾಲ್ಪನಿಕ ಗುಣ ಗಳನ್ನಾರೋಪಿಸಿ, ಪೂಜೆ ಪುರಸ್ಕಾರ ಮಾಡಿ ಲೌಕಿಕ ಆರಾಧನೆ ನಡೆಸುತ್ತಿರುವರು. ಆದರೆ ಇವೆರಡರ ಬುಡದಲ್ಲಿರುವ ಭ್ರಾಂತಿಯು ಒಂದೇ ರೀತಿಯದಲ್ಲವೇ? ಹೀಗೆ ಸಾಮಾಜಿಕ ಹಿತಕ್ಕಾಗಿ ಸೃಷ್ಟಿ ಸಲ್ಪಟ್ಟಿರುವ ದೇವರು ಈ ವರೆಗೂ ಈಗಲೂ ನಾನಾ ರೂಪ ದಿಂದ ನಾನಾ ಲೀಲೆಗಳನ್ನೆಲ್ಲಾ ತೋರಿಸುತ್ತಾ ಬಂದಿರುವನು. ಮಾನವನ ಪರಾವಲಂಬನೆಯ ಹೆಗ್ಗುರುತಾಗಿ ಪೂಜನೀಯ ಸ್ಥಾನ ಮಾನ ಪಡೆದು ಮೆರೆದಾಡಿಕೊಂಡು ಬಂದಿರುವನು.

## ಜನತೆಯೇ ದೇವರು.

ಆದರೆ ಮಾನವನೀಗ ಸ್ವಾಭಿಮಾನಿಯಾಗಿ, ಸ್ವಾವಲಂಬಿ ಯಾಗುತ್ತಾ ಬರುತ್ತಿರುವನು. ವಿಜ್ಞಾನ ಶೋಧಗಳಿಂದ ಪ್ರಕೃತಿ ಯ ಮೇಲೆ ತನ್ನ ವಿಜಯ ಪತಾಕೆಯನ್ನೂರಿರುವನು. ಸ್ವತಂತ್ರ ವಿಚಾರಿಯಾಗಿ ದೇವಧರ್ಮಗಳ ಮುಸುಕಿನಿಂದ ಹೊರಬಿದ್ದಿರು ವನು. ಸಂಘಹಿತಕ್ಕಾಗಿ ಆತನೆಬ್ಬಿಸಿದ ಭೂತವೇ ಆತನನ್ನು ಸಂಪೂರ್ಣವಾಗಿ ತನ್ನ ಅಧೀನಗೊಳಿಸಿ ಆತನಿಂದ ಪೂಜೆ ಪುರ ಸ್ಕಾರ ಪಡೆಯಿತು. ಆದರೆ ಈಗ ಈ ಪರಾಧೀನತೆಯು ಆತ ನಿಗೆ ಹಾನಿಕರವೂ ಅಸಹನೀಯವೂ ಆಗಿದೆ. ಆತನೀಗ ತನ್ನ ಕಾಲಮೇಲೆಯೇ ನಿಂತು ತನ್ನ ಸುಖಾನುಕೂಲತೆಯ ವ್ಯವಸ್ಥೆ ಮಾಡಿಕೊಳ್ಳುವಷ್ಟರ ವಿಚಾರವಂತನೂ, ಶಕ್ತಿವಂತನೂ, ಸ್ವತಂತ್ರ ನೂ ಆಗಿರುವನು. ದೇವಧರ್ಮಗಳ ದಾಸ್ಯವು ಅವನ ಸುಖ ಮತ್ತು ಉನ್ನತಿಗೆ ದೊಡ್ಡ ತೊಡಕಾಗಿದೆ. ಇಂದೀಗ ಮಾನವ

ಸೋದರತ್ವಕ್ಕೆ, ಲೋಕ ಸುಖ ಸುಭಿಕ್ಷೆಗಳಿಗೆ ದೊಡ್ಡ ಆತಂಕ ವಾಗಿರುವವುಗಳಲ್ಲಿ ಮೊದಲನೇದು ಧರ್ಮ. ಎರಡನೇದು ಸೇನಾಬಲ. ಯುದ್ಧ ಮನೋವೃತ್ತಿಯ ಪೋಷಕವಾದ ಸೇನಾ ಸಿದ್ಧತೆಯ ವೆಚ್ಚಕ್ಕಾಗಿ ನೀರಿನಂತೆ ಕೋಟಿಗಟ್ಲೆ ಹಣ ವ್ಯಯ ವಾಗುತ್ತಿರುವುದು. ಆದರೆ ಇದಕ್ಕಿಂತಲೂ ನೂರುಪಾಲು ಹಣವು ಕಾಲ್ಪನಿಕ ದೇವ ದೇವತೆಗಳ ಪೂಜೆ ಪುರಸ್ಕಾರಕ್ಕಾಗಿ, ಗುಡಿ ಗೋಪುರಗಳಿಗಾಗಿ, ಭಾವಿಕ ಪರಲೋಕ ಸಿದ್ಧತೆಗಾಗಿ ದುರ್ವ್ಯ ಯವಾಗುತ್ತಿರುವುದು. ವಿಚಾರಿಸಿದರೆ ಲೋಕದಲ್ಲಿ ಇಂತಹ ಅಪಾರ ಅಪವ್ಯಯವು ಇನ್ನೊಂದಿರುವುದೇ? ಅದಕ್ಕೊಂದು ಮಿತಿಯುಂಟೇ? ಅದನ್ನು ಲೆಕ್ಕಹಾಕಿದವರಾರಾದರೂ ಇರುವರೇ? ಇಡೀ ಲೋಕವೇ ಸಾಂಪತ್ತಿಕ ಗ್ರಹಣಕ್ಕೊಳಗಾಗಿ ಮುಗ್ಗರಿಸು ತ್ತಿರುವವಾಗ, ಕೋಟಿಗಟ್ಲೆ ಜನರು ಸರಿಯಾದ ವಸತಿಗೆ, ಹೊಟ್ಟೆ ಬಟ್ಟೆಗೆ ಗತಿಯಿಲ್ಲದೆ ಜೀವನ್ಮೃತಾವಸ್ಥೆಯಲ್ಲಿರಬೇಕಾಗಿರುವಾಗ, ಸಾವಿರಾರು ಕೋಟಿಗಟ್ಲೆ ಹಣವನ್ನು ದೇವರ ನೆಲೆಯೆಂಬ ಬಯ ಲು ಭ್ರಾಂತಿಯಿಂದ ಕಲ್ಲಿನ ಮೂರ್ತಿಪ್ರತಿಮೆಗಳ ಶೃಂಗಾರಕ್ಕಾಗಿ, ಗುಡಿ, ಗೋಪುರ, ಚರ್ಚ್ ಮಸೀದಿ, ಮಂದಿರಗಳ ರಚನೆಗಾಗಿ ವ್ಯಯಿಸುವುದಕ್ಕಿಂತ ವಿಕಟ ವಿಪರ್ಯಾಸವು ಇನ್ನೊಂದಿರುವು ದೇ? ಈ ಹಣವೂ, ಯುದ್ಧ ಸಿದ್ಧತೆಗಾಗಿ ವ್ಯಯಿಸಲ್ಪಡುವ ಧನ ವೂ, ಮಾನವ ಸುಖಸಾಧನೆಗಾಗಿ, ಲೋಕ ಸುಭಿಕ್ಷೆಗಾಗಿ ವಿನಿ ಯೋಗಿಸಲ್ಪಡುವಂತಾದರೆ ಲೋಕದ ದುರ್ಭಿಕ್ಷೆ ದಾರಿದ್ರ್ಯ, ದುಃಖ ಸಂಕಷ್ಟಗಳನ್ನು ಎಷ್ಟೊಂದು ಕಡಿಮೆಮಾಡಬಹುದೆಂಬು ದನ್ನೊಮ್ಮೆ ಕಲ್ಪಿಸಿದರೆ ಎಂತಹ ಹೃದಯವಾದರೂ ಕರಗಿ ನೀರಾ ಗದಿರದು.

ಧರ್ಮವು ಮಾನವ ಸಹೋದರರನ್ನು ಕ್ರೈಸ್ತರಾಗಿ, ಮುಸ ಲ್ಮಾನರಾಗಿ, ಹಿಂದುಗಳಾಗಿ ವಿಂಗಡಿಸಿ ಕಠಿಣ ಕಟ್ಟುಗಳೊಳಗೆ

ಪ್ರತ್ಯೇಕಿಸಿಟ್ಟಿರುವುದು. ಲೋಕದ ನಿಜವಾದ ನೈತಿಕೋನ್ನತಿಗೆ ತಡೆ ಹಾಕಿರುವುದು. ಸಮಾಜದ ಸುವ್ಯಸ್ಥೆಗೆ ಅಡ್ಡ ನಿಂತಿರುವುದು. ಇಹಲೋಕಸುಭಿಕ್ಷೆಯು, ಮಾನವ ಸಮಾಜದ ನವವ್ಯವಸ್ಥೆಯು ಗೊಡವೆ ಅದಕ್ಕಿಲ್ಲ. ಪರಲೋಕ ಮಾರ್ಗತಯಾರಿಯ ಜವಾಬ್ದಾರಿ ಮಾತ್ರ ಅದರದು. ಈ ಲೋಕದ ಮಾನವರನ್ನು ಪರಲೋಕ ಯಾತ್ರೆಗೆ ಅಣಿಗೊಳಿಸುವ ಸಂಸ್ಥೆಯದು. ಆದರೆ ಇಂದೀಗ ಈ ಧರ್ಮವು ಮೂಲೆಗುಂಪಾಗುತ್ತಿರುವುದು. ವಿಚಾರಿಗಳಿಗದು ಬೇಡವಾಗುತ್ತಾ ಬಂದಿರುವುದು. ಇನ್ನು ಮುಂದೆ ದೇವಧರ್ಮಗಳು ಜನತೆಯ ಹಿತದಲ್ಲಿ, ಸಮಾಜೋನ್ನತಿಯಲ್ಲಿ ಸಂಪೂರ್ಣ ಲೀನವಾಗಿ ಹೋಗದಿರವು. ಇಂದೀಗ ಎಲ್ಲೆಲ್ಲಿಯೂ ಆ ಚಿನ್ಹೆಯೇ ತೋರಿಬರುತ್ತಿರುವುದು.

## ರಶ್ಯದ ಸಮಾಜ ವ್ಯವಸ್ಥೆ.

ರಶ್ಯದಲ್ಲೀಗ ಸಮಾಜಹಿತದ ಹೊರತು ಬೇರೆ ದೇವರಿಲ್ಲ. ಇಡೀ ಲೋಕದ ಜನ ಸತ್ತೆ, ಮತ್ತು ವಿಶ್ವಬಾಂಧವ್ಯವೇ ರಶ್ಯದ ಗುರಿ. ರಶ್ಯದಲ್ಲಿ ದೇವರು ಜನಹಿತದಲ್ಲಿ ಲೀನನಾಗಿರುವನು. "ರಶ್ಯದ ನವಕ್ರಾಂತಿಯು ಯೇಸುವನ್ನು ಚರ್ಚಿನಿಂದ ಹೊರಡಿಸಿತು. ಅಂದಿನಿಂದ ಕ್ರಮೇಣ ಆ ಯೇಸುವು ರಾಜ್ಯದ ಹೃದಯದಲ್ಲೆಲ್ಲ ಹಬ್ಬಿಕೊಂಡುಬಿಟ್ಟ"ನೆಂದು ಪಂಡಿತ ತಾರಾನಾಥರು ರಶ್ಯವೇ ಇಂದೀಗ ಲೋಕದ ಅತಿ ದೊಡ್ಡ ಆಸ್ತಿಕ ರಾಜ್ಯವೆಂದು ಸ್ಪಷ್ಟಪಡಿಸಿರುವರು. ಆಸ್ತಿಕ್ಯ ನಾಸ್ತಿಕ್ಯಗಳ ಅರ್ಥವು ದೇವರಿದ್ದಾನೆಂಬ ನಂಬಿಗೆಯಲ್ಲಿಲ್ಲ. ಇತರರನ್ನು ತನ್ನಂತೆಯೇ ಭಾವಿಸಿ ಸೇವಿಸುವವನೇ ಆಸ್ತಿಕನು. ಹಾಗಿಲ್ಲದವನು ದೇವಧರ್ಮಗಳ ವೇಷಭೂಷಣಗಳನ್ನು ಎಷ್ಟು ಹಾಕಿಕೊಂಡರೂ ನಾಸ್ತಿಕನೇ. 'ಇತರರಿಗಾಗಿ ತಾನು' ಎಂದು ದುಡಿಯುವವನು

ನಿಜವಾದ ಆಸ್ತಿಕನು, ಧರ್ಮಪ್ರವೃತ್ತನು. 'ತನ್ನ ಸುಖಕ್ಕಾಗಿಯೇ ಇತರರೆಲ್ಲ' ಎಂದಿಟ್ಟುಕೊಂಡು ವರ್ತಿಸುವವನು ಕೆಟ್ಟ ಕ್ರೂರ ನಾಸ್ತಿಕನು. ಈ ಭಾವನೆಯು ಯಾವ ಧರ್ಮಕ್ಕಾದರೂ ಸೇರಿದ ಸಾಮಾನ್ಯಜನತೆಗಿದೆಯೇ? 'ಪರಲೋಕದಲ್ಲಿರುವ ನಮ್ಮ ತಂದೆಯೇ ನಿನ್ನ ರಾಜ್ಯವು ಬರಲಿ' 'ಲೋಕಾಃ ಸಮಸ್ತಾಃ ಸುಖಿನೋಭವಂತು' ಎಂದೆಲ್ಲಾ ಅನುನಿತ್ಯ ಪ್ರಾರ್ಥಿಸುವ ಜನರ ರಾಜ್ಯದಲ್ಲಿಯೇ ಜನತೆಗೆ ಎಷ್ಟೊಂದು ಸುಖವಿರುವುದು! ಒಬ್ಬೊಬ್ಬ ಲಕ್ಷಾಧೀಶರಿಗೆ ಲಕ್ಷಗಟ್ಲೆ ಭಿಕ್ಷಾಧೀಶರಿದ್ದಾರೆ. ಕೆಲವರಿಗೆ ಅರಮನೆಗಳಿದ್ದರೆ ಉಳಿದವರಿಗೆ ಅರೆಮನೆಯಾದರೂ ಇಲ್ಲ. ಕೂಳುಗಾಣದ ರೈತ ಕೂಲಿಗಳ ಸಂಖ್ಯೆ ಲಕ್ಷೋಪಲಕ್ಷ! ಆದರೆ ರಸ್ಯದಲ್ಲಿ ಅನುದಿನದ ರೊಟ್ಟಿ ಸಿಕ್ಕದ ವ್ಯಕ್ತಿಯಿಲ್ಲ. ಕೆಲಸ ಕೂಲಿ ಸಿಗದೆ ನರಳುವ ಸಂಭವವಿಲ್ಲ. ಓದುಬರಹ ಕಲಿಯುವ ಅದೃಷ್ಟವಿರದ ಮಕ್ಕಳಿಲ್ಲ. ಅನ್ನಬಟ್ಟೆ ಶಿಕ್ಷಣಗಳ ವ್ಯವಸ್ಥೆಯು ಅಲ್ಲಿಯ ಮಕ್ಕಳ ಜನ್ಮಸಿದ್ಧ ಹಕ್ಕು. ರೂಢಿಗಾಗಿ ಮಾತ್ರ ದೇವ ಧರ್ಮಗಳನ್ನಿಟ್ಟುಕೊಂಡಿರುವ ಹಿಂದುಗಳಲ್ಲಾಗಲಿ ಇನ್ನಾರಲ್ಲಾಗಲಿ ಪ್ರಜಾಭಿವೃದ್ಧಿಗಾಗಿ ನಾಸ್ತಿಕವೆನಿಸಲ್ಪಡುವ ರಸ್ಯದಲ್ಲಿರುವ ಸುವ್ಯವಸ್ಥೆಯಿದೆಯೆ? ಎಂದೆಲ್ಲಾ ಪಂಡಿತ ತಾರಾನಾಥರು ರಸ್ಯದ ಸಮಾಜ ವ್ಯವಸ್ಥೆಯನ್ನು ಬಹಳವಾಗಿ ಪ್ರಶಂಸಿಸಿರುವರು. ಆಸ್ತಿಕವೆನಿಸುವ, ದೇವಧರ್ಮಗಳ ಆಶಯವೆನಿಸುವ ರಾಜ್ಯಗಳಿಗೆ ಸಾವಿರಾರು ವರ್ಷಗಳಿಂದ ಸಾಧಿಸಲಾಗದೆ, ಕಾಲ್ಪನಿಕ ದೇವರಾಜ್ಯವೋ, ರಾಮರಾಜ್ಯವೋ ಆಗಿ ಉಳಿದಿರುವ ಉತ್ಕೃಷ್ಟ ಸಮಾಜ ವ್ಯವಸ್ಥೆಯನ್ನು ರಸ್ಯವು ಕೇವಲ ೧೫ ವರ್ಷಗಳಲ್ಲಿ ಸ್ಥಾಪಿಸಿ, ಜನತೆಯ ದುಃಖ, ದುರ್ಭಿಕ್ಷೆ, ಅಜ್ಞಾನಾದಿ ಸಂಕಷ್ಟಗಳನ್ನು ನಿವಾರಿಸಿರುವುದೆಂದಾದ ಮೇಲೆ ಇತರ ರಾಷ್ಟ್ರಗಳ ಆಸ್ತಿಕತನಕ್ಕಿಂತ, ದೇವಧರ್ಮ ಪುರಸ್ಕಾರಕ್ಕಿಂತ, ರಸ್ಯದ ನಾಸ್ತಿಕತನವೇ,

ಶಿವಧರ್ಮ ಬಹಿಷ್ಕಾರವೇ ಎಷ್ಟೋ ಮೇಲಾದುದಲ್ಲವೇ? ರಶ್ಯದ ದೇವರಿಗೆ ಇಂದು, ದೇವಸ್ಥಾನ, ಇಗರ್ಜಿ, ಮಸೀದಿಗಳ ಪೂಜೆ ಪುರಸ್ಕಾರ ಬೇಕಾಗಿಲ್ಲ. ಪುರೋಹಿತ ಪಾದರಿ ಮುಲ್ಲರುಗಳ ಮಧ್ಯಸ್ತಿಕೆಯು ಅವಶ್ಯವಿಲ್ಲ. ಧರ್ಮಶಾಸ್ತ್ರಗಳ ಉಪಾಧಿಯ ಆವಶ್ಯಕತೆಯಿಲ್ಲ. ಸಮಾಜಹಿತ, ಸಮಾಜ ಕಲ್ಯಾಣ, ಸಮಾಜ ಸುಖದಲ್ಲೇ ಆತನು ಸಂಪೂರ್ಣ ಲೀನನಾಗಿ ಸುಪ್ರಸನ್ನನಾಗಿರುತ್ತಾನೆ. ಈ ನವ ಸಮಾಜ ವ್ಯವಸ್ಥೆಯೇ ಇಡೀ ಲೋಕದಲ್ಲಿ ಸಂಸ್ಥಾಪಿತವಾಗಿ, ಜಾಗೃತ ಜನಸತ್ತೆಯ ಛತ್ರದಡಿಯಲ್ಲಿ ಇಡೀ ಮಾನವ ಕೋಟಿಯು ಧರ್ಮ, ಜನಾಂಗ, ವರ್ಗಭೇದಾದಿಗಳನ್ನೆಲ್ಲಾ ಮೂಲೆಗೊತ್ತಿ ಒಂದುಗೂಡುವಂತಾದರೆ ವಿಶ್ವವ್ಯಾಪಿ, ವಿಶ್ವಪ್ರೇಮಿ ದೇವರು ಮತ್ತಷ್ಟು ಪ್ರಸನ್ನನಾಗದಿರನು. ಯಾಕಂದರೆ ಲೋಕಕಲ್ಯಾಣ, ಮಾನವ ಕೋಟಿಯ ಸುಖ ಸುಭಿಕ್ಷೆಯಲ್ಲದೆ ಆತನಿಗಿನ್ನೇನು ಬೇಕು?

“ಸರ್ವ ಆತ್ಮಗಳ ಆತ್ಮನನ್ನು, ಎಲ್ಲಕ್ಕಿಂತಲೂ ಹೆಚ್ಚಾಗಿ ಎಲ್ಲಾ ಜನಾಂಗ ಜಾತಿಗಳ ದೀನ ದುಃಖಿತ ದರಿದ್ರ ಜನರಲ್ಲಿರುವ ಏಕಮಾತ್ರನಾದ ದೇವರನ್ನು ಪೂಜಿಸುವಂತಾಗಲಿ. ಪ್ರತಿಯೊಂದು ಜೀವಕೋಟಿಯಲ್ಲಿಯೂ ದೇವರಿರುವನು. ಅದರ ಹೊರತು ಬೇರೊಬ್ಬ ದೇವರಿಲ್ಲ. ಸಮುಸ್ತ ಜೀವರಾಶಿಗಳ ಸೇವೆಯೇ ದೇವರ ಸೇವೆ. ಇಂತಹ ದೀನ ದರಿದ್ರ ಜನಸೇವೆಯು ದರಿದ್ರ ನಾರಾಯಣ ಪೂಜೆಯು. ಇದೀಗ ಇಷ್ಟೊಂದು ತಪಸ್ಸಿನ ನಂತರ ತಾನು ತಿಳಿದಿರುವ ಪರಮ ಸತ್ಯ”ವೆಂಬ ಆಸ್ತಿಕ ಶಿಖಾಮಣಿ ಸ್ವಾಮಿ ವಿವೇಕಾನಂದರ ಮಾತಿಗೂ ರಶ್ಯದ ಸಮಾಜ ಹಿತವಾದಕ್ಕೂ ನನಗೇನೂ ಅಭ್ಯಂತರ ತೋರುವುದಿಲ್ಲ. ನೀವು ಮೊದಲು ದೇವರಾಜ್ಯವನ್ನು ಕಂಡುಕೊಳ್ಳಿರಿ ಎಂದು ಯೇಸು ಸ್ವಾಮಿಯು ಹೇಳಿರುವನು. ಆದರೆ ಅದು ಅಲ್ಲಿ ಇಲ್ಲಿ ಅಥವಾ

ಮತ್ತೆಲ್ಲಿಯಾದರೂ ಇರುವದೆಂದು ಆತನು ಹೇಳಲಿಲ್ಲ. ನಾವು ಎಲ್ಲೆಲ್ಲಿರುವೆವೋ ಆ ರಾಜ್ಯವೂ ಅಲ್ಲಿರುವುದೆಂದು ಹೇಳಿರುತ್ತಾನೆ. ತತ್ವಜ್ಞಾನ ದೃಷ್ಟಿಯಿಂದ ನೋಡಿದರೆ ಇಲ್ಲಿ ಎಂಬುದನ್ನು ಬಿಟ್ಟರೆ ಬೇರೆ ಸ್ಥಳವೇ ಇಲ್ಲ. ಈಗ ಎಂಬುದರ ಹೊರತು ಬೇರೆ ಕಾಲವೇ ಇಲ್ಲ. ಯಾಕಂದರೆ ಕಾಲದೇಶಗಳೆಂಬವು ನಮ್ಮ ಈಗಣ ಅರಿವಿಗೆ ಸಂಬಂಧಪಟ್ಟ ಉಪಾಧಿಗಳಾಗಿರುತ್ತವೆ. ಯೇಸುವಿನ ದೇವರಾಜ್ಯಕ್ಕೂ, ಗಾಂಧಿಜಿಯವರ ರಾಮರಾಜ್ಯಕ್ಕೂ ಈಗ ಸರ್ವಸಾಧಾರಣ ಸಮೀಪ ಬರುವ ಸಮಾಜ ವ್ಯವಸ್ಥೆಯೆಂದರೆ ರಸ್ಯದ ಸೋವಿಯೆಟ್ ರಾಜ್ಯಭಾರ.

ಪ್ರಕೃತಿಯ ತಿರುಳು ಸುಖ. ಉದ್ದೇಶವು ಪ್ರಗತಿ, ವಿಕಾಸ. ಅದರ ರೀತಿಯು ಕರ್ಮ. ವ್ಯಕ್ತಿವರ್ಗಗಳ ಹಿತ ವಿಕಾಸ ವಿರೋಧವಾದ ಇಂದಿನ ಧರ್ಮದೇವರುಗಳು ಅಳಿದು ಹೊಸ ಸೃಷ್ಟಿಯಾಗಬೇಕು. ಸ್ವಾರ್ಥಪರ ಸಂಘಜೀವನದಿಂದುಂಟಾಗಿರುವ ಅವುಗಳಿಂದೆಲ್ಲಾ ಮೊದಲು ಬಹಳ ಅನಾಹುತವಾಗಿರುವುದು; ಇಂದೂ ಆಗುತ್ತಿರುವುದು. ಮುಂದೆಯೂ ಆಗಲಿರುವುದು. ಇಂತಹ ಪ್ರಗತಿವಿನಾಶಕ ಮಂಕುತನದಿಂದ ಮಾನವಕೋಟಿಯು ದೂರವಾಗಬೇಕು. ಪ್ರಜಾಹಿತ ಮತ್ತು ಜ್ಞಾನಾಭಿವೃದ್ಧಿಯನ್ನು ಬಿಟ್ಟರೆ ಧರ್ಮದ ವ್ಯಾಖ್ಯೆ ಬೇರೊಂದಿಲ್ಲ. ಮಾನವನು ತನ್ನ ಬುದ್ಧಿ, ವಿಚಾರ ಕರ್ತೃತ್ವಶಕ್ತಿಗಳಿಂದ ಹೊಸ ಸೃಷ್ಟಿಯನ್ನೇ ನಿರ್ಮಿಸಬೇಕು. ದೇವಧರ್ಮ, ಕಾವ್ಯ, ಕಲೆ, ಸಾಹಿತ್ಯಾದಿಗಳ ಉದ್ದೇಶವೂ ಇದೇ. ಶಾಶ್ವತ ಸುಖ ಸ್ವಾತಂತ್ರ್ಯಗಳ ಬಗ್ಗೆಯೇ ನಾವು ಹುಡುಕುವ ದೇವರೆಂದರೆ. ಅದರ ದಿಗ್ದರ್ಶನವು ರಸ್ಯದ ಹೊಸ ಸೃಷ್ಟಿಯಿಂದಾಗುವುದಿಲ್ಲವೇ? ಇಂತಹ ಜನಹಿತ ಹೊಸ ಸಮಾಜ ರಚನೆಯಲ್ಲಿ ಜನರೆಲ್ಲಾ ಸುಖಸ್ವಾತಂತ್ರ್ಯದಿಂದ ಸಂತುಷ್ಟರಾದರೆ ಸಾಲದೆ? ಮತ್ತೇನಾಗ ಬೇಕು ನಮಗೆ ದೇವಧರ್ಮಗಳಿಂದ?

ಸರಸ ಸಾಹಿತ್ಯದ ರಸದೂಟ

# ಕೂದಲ್ನಡಿ ಗ್ರಂಥಮಾಲೆ

## ಉಡುಪಿ

ವರ್ಷಕ್ಕೆ ಸುಮಾರು ೩ ಗ್ರಂಥಗಳು




ಸ್ಥಾಪನೆ:

ಪ್ರಮೋದೂತ, ವಿಜಯ ದಶಮಿ

1930

ಸಂಪಾದಕರು:

ಕೆ. ಹೊನ್ನಯ್ಯ ಶೆಟ್ಟಿ

ಪಿ. ವೆಂಕಟರಮಣಾಚಾರ್ಯ

**ಪ್ರಾರ್ಥನೆ**—ಸಾಹಿತ್ಯಗಳ ಮೇಲಾಟದ ಕಾಲವಿದು. ಕನ್ನಡವೂ ಅವುಗಳ ಸಹಪಂಕ್ತಿಯಲ್ಲಿ ತಲೆಯೆತ್ತಿ ನಿಂತು ಸ್ಪರ್ಧಿಸಲೆಂದು ಹಿರಿಯರ ಪ್ರಯತ್ನ. ಅವರ ಪ್ರಯತ್ನದಲ್ಲಿ ತುಸು ಬೆಂಬಲದ ಸೇವೆಯನ್ನು ಮಾಡಬೇಕೆಂದು 'ಕಿರಿಯರ' ಭಾವನೆ. ಈ ಭಾವನೆಯೇ ದೈವಪ್ರೇರಣೆಯಿಂದ **'ಕಿರಿಯರ ಪ್ರಪಂಚ'**ವಾಗಿ ತಲೆಯೆತ್ತಿರುವುದು.

ಸಮಾಜದ ಏರಿಳಿಕೆಗಳು ಅದರ ಆಚಾರದಲ್ಲಡಕವಾಗಿವೆ. ಆಚಾರದ ಒಳಿತು ಹೀನತೆಗಳು ವಿಚಾರದ ಕೈಯೊಳಗಿವೆ ಇಂತಹ ಸುವಿಚಾರದ ಪಡಿಯಚ್ಚುಗಳನ್ನು ಸಾಧ್ಯವಾದ ಮಟ್ಟಿಗೆ ಸಂಗ್ರಹಿಸಿ ಸಮಾಜದ ಮುಂದಿಡುವುದೇ 'ಕಿರಿಯರ ಪ್ರಪಂಚ'ದ **'ತೊದಲ್ನುಡಿ'** ಗ್ರಂಥಮಾಲೆಯ ಹಿರಿ ಗುರಿ. ಮಾಲೆಯಲ್ಲಿ ಈ ಪಡಿಯಚ್ಚುಗಳು ಕಥೆ, ಕಾದಂಬರಿ, ಕವನ, ನಾಟಕಾದಿಗಳ ರೂಪದಲ್ಲಿ ಹೊರಬೀಳುವವು. ಈ ನಮ್ಮ ಕಾರ್ಯದಲ್ಲಿ ಭಾಷಾಭಿಮಾನಿಗಳೂ ದೇಶಾಭಿಮಾನಿಗಳೂ ಕೈಕೊಟ್ಟು ಸಹಕರಿಸಿ ನಮ್ಮಿಂದ ಸೇವೆಯನ್ನು ಮಾಡಿಸಿಕೊಳ್ಳಬೇಕಾಗಿ ಪ್ರಾರ್ಥನೆ.

೧ **ಸ್ಥಾಪಕರು**— ಗ್ರಂಥಮಾಲೆಗೆ ೫೦ ರೂಪಾಯಿ ಕೊಟ್ಟವರು. ಇವರಿಗೆ ಕೊನೆಯ ವರೆಗೂ ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಗ್ರಂಥಗಳನ್ನು ಕೊಡುವೆವಲ್ಲದೆ ಆ ಎಲ್ಲಾ ಗ್ರಂಥಗಳಲ್ಲಿಯೂ ಇವರ ಹೆಸರನ್ನು ಪ್ರಕಟಿಸುವೆವು.

೨ **ರಕ್ಷಕರು**—ಗ್ರಂಥಮಾಲೆಗೆ ೨೫ ರೂಪಾಯಿ ಕೊಟ್ಟವರು. ಇವರಿಗೆ ಕೊನೆಯ ವರೆಗೂ ಗ್ರಂಥಗಳನ್ನು ಕೊಡಲಾಗುವುದಲ್ಲದೆ ೧೫ ಗ್ರಂಥಗಳಲ್ಲಿ ಇವರ ಹೆಸರನ್ನು ಪ್ರಕಟಿಸಲಾಗುವುದು.

೩ **ಆಶ್ರಯದಾತರು**— ಗ್ರಂಥಮಾಲೆಗೆ ೧೦ ರೂಪಾಯಿ ಕೊಟ್ಟವರು. ಇವರಿಗೆ ೧೦ ವರ್ಷಗಳವರೆಗೆ ಗ್ರಂಥಗಳನ್ನು ಕೊಡಲಾಗುವುದಲ್ಲದೆ ೧೦ ಗ್ರಂಥಗಳಲ್ಲಿ ಇವರ ಹೆಸರನ್ನು ಪ್ರಕಟಿಸಲಾಗುವುದು.

೪ **ಪೋಷಕರು**— ಗ್ರಂಥಮಾಲೆಗೆ ೫ ರೂಪಾಯಿ ಕೊಟ್ಟವರು. ಇವರಿಗೆ ೫ ವರ್ಷಗಳ ವರೆಗೆ ಗ್ರಂಥಗಳನ್ನು ಕೊಡಲಾಗುವುದಲ್ಲದೆ ೫ ಗ್ರಂಥಗಳಲ್ಲಿ ಇವರ ಹೆಸರನ್ನು ಪ್ರಕಟಿಸಲಾಗುವುದು.

೫ **ಚಂದಾದಾರರು**—ಆರಂಭದಲ್ಲಿ ಒಂದು ರೂಪಾಯಿ ಪ್ರವೇಶಧನವನ್ನು ಕೊಟ್ಟು ತಮ್ಮ ಹೆಸರನ್ನು ಚಂದಾದಾರರ ಪಟ್ಟಿಯಲ್ಲಿ ಸೇರಿಸಿಕೊಳ್ಳಬೇಕು. ಇವರಿಗೆ ಗ್ರಂಥಮಾಲೆಯ ಗ್ರಂಥಗಳನ್ನು ¾ ಬೆಲೆಗೆ ಕೊಡಲಾಗುವುದು. ಮುಂದಾಗಿ ತಿಳಿಸಿ ಕಳುಹುವ ವಿ. ಪಿ. ಯನ್ನು ತಿರಸ್ಕರಿಸಿದವರ ಹೆಸರನ್ನು ಪಟ್ಟಿಯಲ್ಲಿರಿಸುವುದೂ ಅಗತ್ಯ ಕಂಡ ಬದಲಾವಣೆಗಳನ್ನು ಮಾಡುವುದೂ ಗ್ರಂಥಮಾಲೆಯವರ ಇಷ್ಟ.

—ಕಾರ್ಯದರ್ಶಿ.

## ತೊದಲ್ನುಡಿ ಗ್ರಂಥಮಾಲೆಯ ಪುಸ್ತಕಗಳು.

### ಸ್ವತಂತ್ರ ಜೀವನೋಪಾಯ (ದ್ವಿತೀಯಾವೃತ್ತಿ) ಬೆಲೆ ೦—೨—೬

ಜೀವನದ ಹೋರಾಟವನ್ನು ಕಣ್ಣ ಮುಂದಿರಿಸಿ ಸ್ವತಂತ್ರಜೀವನ ನಡೆಸುವ ವಿಧಾನವನ್ನು ವಿವರಿಸುವ ಚಿಕ್ಕ ಪುಸ್ತಕ.

'ಉಡುಪಿಯ ಕೆಲವು ಉತ್ಸಾಹೀ ತರುಣರು ಕೂಡಿ 'ತೊದಲ್ನುಡಿ ಗ್ರಂಥಮಾಲೆ'ಯೆಂಬುದನ್ನು ಹೊರಡಿಸಿರುವರು. ಅದರ 'ಮೊದಲನುಡಿ'ಯಿದು. ನಾಟಕೆಯ ರೂಪದಲ್ಲಿ ಬರೆಯಲಾಗಿದೆ....ಸಂವಾದದಲ್ಲೆಲ್ಲ ಪ್ರತಿಯೊಂದು ದೃಶ್ಯದಲ್ಲಿ, ಗಾದೆಗಳೂ ನಾನಾ ಉಪಮೆಗಳೂ ಅವಿರಳವಾಗಿ ಪೋಣಿಸಲ್ಪಟ್ಟಿವೆ. ಶೈಲಿಯು ಚಲೋದಿದೆ. ಇವರ ನುಡಿಗಳು ಹೆಚ್ಚಿ, '**ಕಿರಿಯರ ಪ್ರಪಂಚ**'ವು ಹಿರಿದೆನಿಸಲೆಂದು ಹಾರೈಕೆ.' —ಕಂಠೀರವ

'ಈಗಣ ನಿರುದ್ಯೋಗ, ದುಂದುಗಾರಿಕೆ, ಸಾಲಗಾರಿಕೆ ಮೊದಲಾದ ಪರೋಪಜೀವನಗಳಿಗೆ ಜನರು ಬಲಿಬೀಳದೆ, ಬೇರೆ ಬೇರೆ ವೃತ್ತಿಗಳಲ್ಲಿ ನಿರತರಾಗಿ, ಸ್ವಾಭಿಮಾನದಿಂದ ಸ್ವತಂತ್ರ ಜೀವನ ನಡಿಸುವಂತೆ ಚತುರ ಶಿಕ್ಷಿತ ತರುಣರು ಹಳ್ಳಿಗಳ ಸಂಘಟನಾಕಾರ್ಯವನ್ನು ಕೈಕೊಂಡು ಯಾವ ರೀತಿಯಲ್ಲಿ ಕೆಲಸಮಾಡಬೇಕೆಂಬ ಆದರ್ಶವನ್ನು ಈ ಚಿಕ್ಕ ವಹಿಯಲ್ಲಿ ನಿರ್ದೇಶಿಸಲಾಗಿದೆ. ಕರ್ನಾಟಕದ ಹಿರಿಯರ ಸಾಹಿತ್ಯಸೇವೆಗೆ ಬೆಂಬಲವೀಯಬೇಕೆಂಬ ಈ 'ಕಿರಿಯರ ಪ್ರಪಂಚ'ದ ಹಿರಿದಿಚ್ಛೆಯು ತಕ್ಕ ಆಶ್ರಯ ಪ್ರೋತ್ಸಾಹ ದೊರೆತು ಸಾರ್ಥಕವಾಗಿ, ಕಿರಿಯರು ಹಿರಿಯರಾಗಿಯೇ ಮೆರೆವಂತಾಗಲೆಂದು ಹಾರೈಕೆ.' —ನವಯುಗ.

### ಸಂಶಯ ಪಿಶಾಚಿ (ದ್ವಿತೀಯ ಮುದ್ರಣ) ಬೆಲೆ ೦—೬—೦

ಅಳಿಯ ಸಂತಾನಕಟ್ಟಿನ, ಮುಖ್ಯವಾಗಿ ಬಂಟ ಸಮಾಜದ ಸದ್ಯದ ನಡವಳಿಕೆಯನ್ನೂ ಅದರಿಂದುಂಟಾಗುವ ದುಷ್ಪರಿಣಾಮಗಳನ್ನೂ ಚಿತ್ತವೇಧಕವಾಗಿ ಚಿತ್ರಿಸಿ ಸಮಾಜದೇಳಿಗೆಯ ಮಾರ್ಗವನ್ನು ಸೂಚಿಸುವ ನಾಟಕವಿದು.

''ಇದೊಂದು ಸಾಮಾಜಿಕ ನಾಟಕ. ಇದರಲ್ಲಿ ವಾಸ್ತವಿಕ ಸ್ಥಿತಿಗತಿಯೇ ಚಿತ್ರಿತವಾಗಿದ್ದು, ಮಂಗಳೂರೇ ಕಥಾಕ್ಷೇತ್ರವಾಗಿದೆ. ಪಾತ್ರಗಳ ಸಂಭಾಷಣೆಯ ಪ್ರತಿ

ಶಬ್ದವೂ ಭಾವಭರಿತವಾಗಿರುತ್ತದೆ. ಇದು ಆಧುನಿಕ ಶೈಲಿಯಿಂದ ಮನೋರಂಜಕವಾಗಿದೆ. ಪೂರ್ವಾಚಾರ ವಿಚಾರಗಳೆಂಬ ಪ್ರೇತಬಾಧೆಯಿಂದ ನಮ್ಮ ಸಮಾಜವು ದಿನೇ ದಿನೇ ಅಧಃಪತನ ಹೊಂದುತ್ತಿರುವ ಕಾಲದಲ್ಲಿ ಇಂತಹ ಪುಸ್ತಕಗಳು ಹೊರಬೀಳುವುದು ಶುಭಚಿಹ್ನೆಯಾಗಿದೆ. ಎಲ್ಲರೂ ಓದಿ ಪ್ರೋತ್ಸಾಹಿಸಬೇಕು.

—ಸ್ವದೇಶಾಭಿಮಾನಿ (ಸಾ. ಸಂಚಿಕೆ)

## ನಾಡ ಕಥೆಗಳು (ಭಾಗ ೧-ಪುನರ್ಮುದ್ರಣ) ಬೆಲೆ ೦—೨—೦

ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ಆಚಾರಾಂಧತೆಗಳ ಪಡಿಯಚ್ಚುಗಳನ್ನು ನೋಡಲಿಚ್ಛಿಸುವವರಿಗೆ ಒಂದೆಡೆ ಕೂಡಿಸಿಟ್ಟ ಚಿಕ್ಕ ಕಥೆಗಳ ಪುಸ್ತಕ

'ಈ ಪುಸ್ತಕದಲ್ಲಿ ಬೇರೆ ಬೇರೆ ಐದು ಜನರು ಬರೆದ, ಸಮಾಜದ ಸ್ವಾಭಾವಿಕ ಚಿತ್ರಗಳನ್ನೊಳಗೊಂಡ ಐದು ಕಥೆಗಳಿವೆ. ಮೊದಲನೆಯ ಕಥೆಯಾದ 'ತಿರುಪತಿ ಮುಡುಪಿನ ಕಳವು' ಎಂಬುವದರಲ್ಲಿ ಬರುವ ಶೆಟ್ಟರು ಭಟ್ಟರು ಎಲ್ಲೆಲ್ಲಿಯೂ ನೋಡಲು ಸಿಕ್ಕುವರು. 'ನಮ್ಮ ಶಾಸ್ತ್ರಗಳು' ಎಂಬ ಎರಡನೆಯ ಕಥೆಯಲ್ಲಿದ್ದ ವಸ್ತುಗಳನ್ನೊಳಗೊಂಡ ಕತೆಗಳು ಈಗಾಗಲೇ ಹಲವು ಪ್ರಸಿದ್ಧವಾಗಿವೆ. 'ಶೆಟ್ರ ಮನೆಯ ಮದುವೆ' ಎಂಬ ಕತೆಯಲ್ಲಿ ಎಡೆಯಾಡುತ್ತಿದ್ದ ಚುಚ್ಚು ನಗೆಯು ವಾಚಕರಿಗೆ ನಗೆಯೊಡನೆ ವೈಚಿತ್ರ್ಯವನ್ನೂ ಹುಟ್ಟಿಸುವುದು...'ಅಂದು ಇಂದು' ಎಂಬುದು ಸೊಗಸಾದ ಸಣ್ಣ ಕಥೆ. ಹೇಳುವ ಮಾತಿನ ರೀತಿಯೂ ಚೆನ್ನಾಗಿದೆ...ಇಲ್ಲಿಯ ಈ ತರುಣ ಕಥಾಲೇಖಕರ ಭವಿಷತ್ ಕಾರ್ಯದ ಕಡೆಗೆ ಹೆಚ್ಚು ಆಶೆಯ ನೋಟದಿಂದ ನಾವು ನೋಡುತ್ತಿದ್ದೇವೆ.

—ಜಯಕರ್ಣಾಟಕ.

"....ಸಣ್ಣ ಕಥೆಗಳ ಸಂಗ್ರಹ. 'ನಮ್ಮ ಶಾಸ್ತ್ರಗಳು' ಎಂಬ ಕತೆಯು ಹೃದಯಂಗಮವಾಗಿದೆ. 'ಅಂದು ಇಂದು' ಎಂಬ ದೃಶ್ಯವು ಮನೋಹರವಾಗಿದೆ....ಇವರ ಪ್ರಯತ್ನಗಳಿಗೆ ಶ್ರೇಯಸ್ಸನ್ನು ಕೋರುವೆವು.

—ಕಂಠೀರವ.

"...ಕಥೆಗಳೆಲ್ಲವೂ ನಮ್ಮ ಹಿಂದೂ ಸಮಾಜದಲ್ಲಿ, ಪುಣ್ಯ-ಪಾಪಗಳು, ಆಚಾರ ವಿಚಾರಗಳು, ಸಂಪ್ರದಾಯ, ಧರ್ಮಗುರುಗಳು ಇವುಗಳ ಮುಸುಕಿನಲ್ಲಿ ನಡೆಯುತ್ತಿರುವ ಹಲವು ಅನನ್ವಿತ ವಿಷಯಗಳನ್ನೆಲ್ಲ ತಕ್ಕ ಉದಾಹರಣೆಗಳಿಂದ ವಿವರಿಸಿ, ಕಾಲ ದೇಶಗಳನ್ನನುಸರಿಸಿ ಪೂರ್ವಾಚಾರಗಳಲ್ಲಿ ಸುಧಾರಣೆಯಾಗ ತಕ್ಕುದು ಅವಶ್ಯವೆಂಬ ತತ್ವವನ್ನು ಸಮರ್ಥಿಸುತ್ತವೆ. ಎಲ್ಲರೂ ಓದಿ ಮನನ ಮಾಡಬೇಕಾದ ಪುಸ್ತಕ.

—ಸುಬೋಧ.

**ಕುಶ - ಲವ** (ಶಿಕ್ಷಣ ಸಂಬಂಧವಾದ ನಾಟಕ) ಬೆಲೆ ೦—೪—೦

ಹಳೆಯ ಕಥೆಯನ್ನು ಹೊಸ ಮಾದರಿಯಲ್ಲಿ ಎರಕಹೊಯ್ದ ಪೌರಾಣಿಕ ನಾಟಕವಿದು. ಈಗಿನ ಶಿಕ್ಷಣದಲ್ಲಿರುವ ದೋಷಗಳನ್ನು ಎತ್ತಿ ತೋರಿಸಿ, ಸುಧಾರಣೆಯ ಹಾದಿಯನ್ನು ಸೂಚಿಸುವ ಗ್ರಂಥ.

**ಕಾವ್ಯಸಾಮ್ರಾಜ್ಯ** (ಕವಿತಾಸಂಗ್ರಹ) ಬೆಲೆ ೦—೧೨—೦

(ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಮುನ್ನುಡಿಯೊಡನೆ)

**'ಸಂಯುಕ್ತ ಕರ್ನಾಟಕ'**ವು ಅನ್ನುವುದೇನೆಂದರೆ—

**'....ಆಧುನಿಕ ಕವಿಗಳ ಕವಿತೆಗಳ ಇಂತಹ ಉತ್ತಮ ಸಂಗ್ರಹವನ್ನು ಈ ವರೆಗೆ ಯಾರೂ ಒದಗಿಸಿ ಕೊಟ್ಟಿರುವುದಿಲ್ಲ. ಇದಕ್ಕಾಗಿ** ಕನ್ನಡಿಗರು 'ಕಿರಿಯರ ಪ್ರಪಂಚ'ಕ್ಕೆ ಆಭಾರ ಮನ್ನಿಸಬೇಕು. ಆದರೆ ಶಬ್ದದಿಂದಲ್ಲ; 'ಕಾವ್ಯಸಾಮ್ರಾಜ್ಯ'ವನ್ನು ಕೊಂಡುಕೊಂಡು ಧನರೂಪದಿಂದ.'

**'ಜಯಕರ್ಣಾಟಕ'**ವು ಹೀಗೆನ್ನುತ್ತದೆ—

''....ಆಧುನಿಕ ಕವಿಗಳ ಕವನಗಳ ಸಂಗ್ರಹವಿದು. ಉತ್ಸಾಹಿಗಳಾದ 'ಕಿರಿಯರು' ಮಾಡಿದ ಸಾಹಸವನ್ನು ನೋಡಿ ಕೌತುಕವೆನಿಸಿತು.'

ಶ್ರೀ. ತಿ. ನ. ಶ್ರೀಕಂಠಯ್ಯನವರು ಬೆಂಗಳೂರಿಂದ ಹೀಗೆ ಬರೆಯುತ್ತಾರೆ—

'...ಗ್ರಂಥವೂ ಒಳಗಿನ ವಿಷಯವೂ ಎರಡೂ ಅಂದವಾಗಿವೆ. ತಮ್ಮ ಸಾಹಿತ್ಯ ಸೇವೆ ಯಶಸ್ವಿಯಾಗಿ ಮುಂದುವರಿಯಲೆಂದು ಹಾರೈಸುತ್ತೇನೆ.'

ಪ್ರೊಫೆಸರ್ ವಿ. ಕೆ. ಗೋಕಾಕರು ಪುಣೆಯಿಂದ ಹೀಗೆ ತಿಳಿಸುತ್ತಾರೆ—

'ಒಳಗೂ ಹೊರಗೂ 'ಸಾಮ್ರಾಜ್ಯ'ವು ಅಂದವಾಗಿದೆ. ಎಲ್ಲ ಭಾಗಗಳ ಕವಿಗಳ ಕೃತಿಗಳು ಪ್ರಾತಿನಿಧಿಕವಾಗಿ ಅದರಲ್ಲಿ ಬಂದು ನಿಂತಿವೆ...ಅತ್ಯಂತ ಸ್ತುತ್ಯವಾಗಿದೆ.'

ಡಾ. ಟಿ. ಮಾಧವ ಪೈ, M. B. & B. S ಉಡುಪಿ ಇವರು ಹೀಗೆ ಬರೆಯುತ್ತಾರೆ—

'...ಕಾವ್ಯಸಾಮ್ರಾಜ್ಯ'ವು ಕನ್ನಡ ಆಧುನಿಕ ಸಾಹಿತ್ಯಕ್ಕೆ ರತ್ನಪ್ರಾಯವಾಗಿದೆ'

''....ಕಾವ್ಯಸಾಮ್ರಾಜ್ಯದಲ್ಲಿ ವಿಶ್ವಕರ್ನಾಟಕದೊಳಗಿನ ಬಹುಶಃ ಎಲ್ಲಾ ಪ್ರಮುಖ ಕವಿಗಳ ಕವನಗಳ ಆಯ್ಕೆಯೊಂದನ್ನು ಕೊಡುವ ಪ್ರಯತ್ನಮಾಡಲಾಗಿದೆ....ಅದರ ಬಾಹ್ಯಾಂಗವು ನಯನ ಮನೋಹರವಾಗಿರುವಂತೆಯೇ ಅಂತರಂಗವೂ ಚೇತೋಪಹಾರಿಯಾಗಿದೆ.

—ಹನುಮಂತರಾವ್ ಮಾಂಜರೇಕರ, B. A. (ಕಾನಡಾವೃತ್ತದಲ್ಲಿ)

## OPINION OF THE "HINDU" MADRAS

**KAVYA SAMRAJYA:**–Published by **Kiriyara Prapancha, Udipi.**

PRICE 0–12–0

When the country is in the throes of a new awakeniag, every attempt to advance the nation's cause should be welcomed. The national edifice, to be lasting, has to be built on the sure foundation of culture. When so many modern thoughts, some of an alien origiu, are seemingly in conflict with established traditions of the country the need for directing young mind, in the proper direction becomes all the more pressing The book under review is a collection of over thirty poems written b) various authors of the Kannada speaking portion of the country The topics are varied. Some of the compositions offer light reading, while others are thought-provoking; but through all there runs the spirit of awakened India, with a nationalistic outlook on life, and great love for the country; its language and culture. 'Kiriyara Prapancha' has chosen the poems carefully and though the poe's are modern and young, the work is such as to appeal to young and old alike.

"....ಇದೀಗ ಈ 'ಕಾವ್ಯಸಾಮ್ರಾಜ್ಯ'ವು ಹೆಚ್ಚು ಭಾರವುಳ್ಳದ್ದಾಗಿದೆ... ಕನ್ನಡ ಕವಿಗಳೆಲ್ಲ ಒಂದುಗೂಡಿದ್ದಾರೆ. ಕವಿತೆಗಳ ಸವಿಯನ್ನುಣ್ಣಬೇಕಾದರೆ 'ಕಾವ್ಯಸಾಮ್ರಾಜ್ಯ'ವನ್ನೇ ನೋಡಬೇಕು; ತರಿಸಿ ಓದಬೇಕು. ಈ ಸರ್ವಶ್ಲಾಘನೀಯ ಯತ್ನವನ್ನು ಪ್ರೋತ್ಸಾಹಿಸದಿದ್ದರೆ ಮತ್ತಾವುದನ್ನು?

— ಬಡವರ ಬಂಧು

"....ಈ ಕವನ ಸಂಗ್ರಹದಲ್ಲಿ ಒಟ್ಟು ೩೮ ಆಧುನಿಕ ಕೃತಿಗಳಿವೆ. ಕರ್ನಾಟಕದ ಎಲ್ಲಾ ಪ್ರಾಂತ್ಯಗಳ ಕವಿಗಳ ಕೃತಿಗಳೂ ಇಲ್ಲಿ ಆಯ್ದು ಸೇರಿಸಲ್ಪಟ್ಟಿವೆ. ಕಥಕ, ವರ್ಣಕ, ಭಾವೋದ್ದ್ಯೋತಕವಾದ ಎಲ್ಲಾ ಬಗೆಯ ಕವಿತೆಗಳೂ ಸೇರಿವೆ...."

— ಪ್ರಬುದ್ಧ ಕರ್ಣಾಟಕ.

"...ಕವಿಕುಲ ತಿಲಕರ ಕವನಗಳನ್ನು ಪೋಣಿಸಿ ಈ 'ಕಾವ್ಯಸಾಮ್ರಾಜ್ಯ'ವೆಂಬ ಮಾಲೆಮಾಡಿ 'ಕಿರಿಯರ ಪ್ರಪಂಚ'ವು ಕನ್ನಡಿಗರ ಕೊರಳಿಗೆ ಹಾಕಿರುವುದು. ಕವಿತಾ ವಾಚಕ ವರ್ಗವು ಅದರ ಸುಗಂಧವನ್ನಾಘ್ರಾಣಿಸಿ ಆನಂದಿಸದಿರದು. **ಸುಲಭ ಬೆಲೆಗೆ ಇಂತಹ ಉಚ್ಚ ಸಾಹಿತ್ಯವನ್ನೊದಗಿಸುತ್ತಿರುವ ಕಿರಿಯರ ಪ್ರಪಂಚಕ್ಕೆ** ಹಿರಿಯರ ಬೆಂಬಲವೂ ಕನ್ನಡಿಗರ ಪ್ರೋತ್ಸಾಹವೂ ಯಥೇಷ್ಟ ದೊರೆತು 'ಮಾಲೆ'ಯು ನಮ್ಮ ಜಿಲ್ಲೆಗೇ ಭೂಷಣಪ್ರಾಯವಾಗುವಂತೆ ಬೆಳೆದು ಬರಲೆಂದು ಹಾರೈಸುವೆವು.

— ಸ್ವದೇಶಿ ಪ್ರಚಾರಕ.

## ಮಧುವನ (ಕಥಾಸಂಗ್ರಹ) ಬೆಲೆ ೧—೮—೦

**ಕಥೆಗಳು ೨೫] ಮಧುವಿಗಿಂತಲು ಮಧುರ [೨೫೬ ಪುಟಗಳು.**

ಕಥೆಗಳೊಂದಿಗೆ ಕಥೆಗಾರರ ಪರಿಚಯವೂ ಪಡಿಯಚ್ಚುಗಳೂ ಪ್ರಕಟವಾಗಿವೆ.

**ಹಬ್ಬದೂಟಕ್ಕಿಂತಲೂ ಸವಿ! ಹೊಸ ಉಡುಗೆಗಿಂತಲೂ ಚೆಲು!**

ಈ ಗ್ರಂಥದಲ್ಲಿ ಕರ್ಣಾಟಕದ ಎಲ್ಲ ವಿಭಾಗಗಳ ಕಥೆಗಾರರೂ ಒಂದುಗೂಡಿದ್ದಾರೆ.

ಪಂಡಿತ ತಾರಾನಾಥ ರಾಯರು, ಶ್ರೀ. ಅ. ನ. ಕೃಷ್ಣರಾಯರು, ಶ್ರೀ. ಕಡೆಂಗೋಡ್ಲು ಶಂಕರ ಭಟ್ಟರು, ಶ್ರೀ. ಕೆ. ಗೋಪಾಲಕೃಷ್ಣರಾಯರು, ಶ್ರೀ. ಎಂ ಎನ್ ಕಾಮತರು, ಶ್ರೀ. ಶಿವರಾಮ ಕಾರಂತರು, ಶ್ರೀ. ಕುಡ್ಪಿ ವಾಸುದೇವ ಶೆಣೈಯವರು, ಶ್ರೀ. ಕೊರಡ್ಕಲ್ ಶ್ರೀನಿವಾಸ ರಾಯರು, ಶ್ರೀ ಬಿ ಅಶ್ವತ್ಥನಾರಾಯಣ ರಾಯರು, ಮಿಸೆಸ್ ಬಿ. ಟಿ ಜಿ. ಕೃಷ್ಣ ಅವರು ಮೊದಲಾದ ೨೫ ಕನ್ನಡ ಕಥೆಗಾರರ ೨೫ ಕಥೆಗಳು

**ಕನ್ನಡದಲ್ಲಿ ಇಂತಹ ಗ್ರಂಥವು ತೀರಾ ವಿರಳ.**

**ಆದರೂ ಬೆಲೆ ಬಹು ಸುಲಭ.**

ಕನ್ನಡದಲ್ಲಿ ಈ ಬಗೆಯ ಗ್ರಂಥವೊಂದಿದ್ದರೆ ಅದೇ, ಈಗತಾನೆ ಹೊಸತಾಗಿ, ಹೊಸ ರೂಪತಾಳಿ, ಹೊರಬಿದ್ದ 'ಮಧುವನ'ವೊಂದೇ.

ಸ್ವತಂತ್ರ ಜೀವನೋಪಾಯ, ಸಂಶಯ ಪಿಶಾಚಿ, ಕುಶಲವ, ಕಾವ್ಯಸಾಮ್ರಾಜ್ಯ ಇವು ಮೈಸೂರಿನ, ಸಂಶಯ ಪಿಶಾಚಿ, ಕುಶಲವ, ಕಾವ್ಯಸಾಮ್ರಾಜ್ಯ ಇವು ಮದ್ರಾಸಿನ, ಕಾವ್ಯಸಾಮ್ರಾಜ್ಯವು ಬೊಂಬಾಯಿಯ ಟೆಕ್ಸ್ಟ್ ಬುಕ್ ಕಮಿಟಿಗಳಿಂದ ಮಂಜೂರಾಗಿವೆ.

ಸದ್ಯವೇ ಪ್ರಕಟವಾಗಲಿವೆ—

೧ ಪ್ರತೀಕಾರ
೨ ಮೀರಾಬಾಯಿ
೩ ಹೂಬುಟ್ಟಿ
೪ ಯೋಗಿಯೊ ಭೋಗಿಯೊ
೫ ಏಕಾಂಕ ನಾಟಕ ಸಂಗ್ರಹ
೬ ಕಾದಂಬರಿಯೊಂದು
೭ ವಿಮರ್ಶಾಗ್ರಂಥವೊಂದು
. . . .

ಸಿಗುತ್ತವೆ—

೧ ನಮ್ಮ ಗ್ರಂಥಗಳು ಕರ್ಣಾಟಕದ ಎಲ್ಲಾ ಪ್ರಸಿದ್ಧ ಪುಸ್ತಕ ವ್ಯಾಪಾರಿಗಳಲ್ಲಿ.
೨ ಕರ್ಣಾಟಕದ ಪ್ರತಿ ಕಡೆಯ ಆಧುನಿಕ ಗ್ರಂಥಗಳು ನಮ್ಮಲ್ಲಿ.

ಉದಾರ ಶರ್ತಗಳ ಮೇಲೆ ಏಜಂಟರು ಬೇಕು
ಹೆಚ್ಚಿನ ಮಾಹಿತಿಯನ್ನು ಬರೆದು ತಿಳಿಯ ಬೇಕು

ಉಡುಪಿ
ದ. ಕ.

ಕಾರ್ಯದರ್ಶಿ,
'ಕಿರಿಯರ ಪ್ರಪಂಚ'

ನವಯುಗಕ್ಕೊಪ್ಪುವ ವಾರ ಪತ್ರಿಕೆ ಯಾವುದು?

ನವಯುಗ

ವಾರ್ಷಿಕ ಚಂದಾ
ರೂ. ೩—೪—೦

ಚಂದಾದಾರರಾಗಿ ಪ್ರೋತ್ಸಾಹಿಸಿರಿ.

Printed by S. U. Paniady at Thulunad Press, Udipi

## ನಮ್ಮ ಗ್ರಂಥಮಾಲೆಯ ರಕ್ಷಕರು *

೧ ಶ್ರೀಯುತ ಪಿ. ಲಕ್ಷ್ಮೀನಾರಾಯಣ ನಾಯಕರು, ಕಟಪಾಡಿ.
೨ ಶ್ರೀಯುತ ಕೆ. ಸುಬ್ರಾಯ ಚರ್ಡಪ್ಪ ಶ್ಯಾನುಭಾಗರು, ಕಟಪಾಡಿ.
೩ ಮೆಸ್ಸರ್ಸ್ ಮಲ್ಪೆ ವಾಮನ ಭಟ್ & ಬ್ರದರ್, ಉಡುಪಿ.

---

## ಆಶ್ರಯದಾತರು §

೧ ಶ್ರೀ ಅಂಬಾಡಿಬೀಡು ಗೋಪಾಲ ಶೆಟ್ಟರು, ಕಟಪಾಡಿ.
೨ ,, ತೋನ್ಸೆ ಜನಾರ್ದನಯ್ಯನವರು, ಉಡುಪಿ.
೩ ,, ಪಿ. ರಾಮದಾಸ ನಾಯಕರು, ಬಿ. ಎ. ಎಲ್. ಟಿ. ಕಟಪಾಡಿ.
೪ ಮಿ. ಯಫ್. ಯಕ್ಸ್. ದಾಲ್ಮೇದರು, ಉದ್ಯಾವರ.
೫ ಶ್ರೀ 'ಕಾಮತ್' ಅವರು, ಕಟಪಾಡಿ.
೬ ,, ಪಾಂಗಾಳ ಜನಾರ್ದನ ನಾಯಕರು, ಕಟಪಾಡಿ.
೭ ,, ಕೆದಿಂಜೆ ವೆಂಕಟಯ್ಯ ಹೆಗ್ಡೆರು, ಜಮೀನ್ದಾರ್, ಯೇಣಗುಡ್ಡೆ.
೮ ,, ಬಿ. ಕೃಷ್ಣಯ್ಯ ಹೆಗ್ಡೇರು, ಜಮೀನ್ದಾರ್, ಹಿರಿಯಡ್ಕ.
೯ ,, ಕೆ. ಸೀತಾರಾಮ ದೊರೆಬಲ್ಲಾಳರು, ಕಟಪಾಡಿ ಬೀಡು.
೧೦ ,, ಎ. ಬಿ. ಶೆಟ್ಟರು, ಎಂ.ಎಲ್.ಸಿ. ಅತ್ತಾವರ, ಮಂಗಳೂರು.
೧೧ ,, ಕೆ. ವಾಸುದೇವ ಚರ್ಡಪ್ಪ ಶ್ಯಾನುಭಾಗರು, ಕಟಪಾಡಿ.
೧೨ ಮೆಸ್ಸರ್ಸ್ ಪಿ. ಎ. ಪೈ ಬ್ರದರ್ಸರವರು, ಉಡುಪಿ.
೧೩ ಶ್ರೀ ಯು. ಸದಿಯನವರು, ಜಮೀನ್ದಾರ್, ಉದ್ಯಾವರ.
೧೪ ,, ಬಿ. ವಾಸುದೇವ ರಾಯರು, ಎಡ್ವೊಕೇಟ್, ಉಡುಪಿ.
೧೫ ,, ಪಿ. ಆನಂದ ನಾಯ್ಕರು, ಮರ್ಚಂಟ್ ಕಟಪಾಡಿ.
೧೬ ,, ಬಿ. ರಾಮಣ್ಣ ಶೆಟ್ರು, ಹೇ. ಮಾ. ಹಾ. ಎ. ಶಾಲೆ, ಬಾರ್ಕೂರು
೧೭ ,, ಕೆ. ಮುದ್ದಣ್ಣ ಶೆಟ್ಟರು, ಹೆಡ್‌ಮಾಸ್ಟರ್, ಕೊರಂಗ್ರಪಾಡಿ.
೧೮ ,, ಎಂ. ವಾಮನ ರಾಯರು, ಎಪೊಲೊ ಸ್ಟ್ರೀಟ್, ಬೊಂಬಾಯಿ.
೧೯ ,, ಪಿ. ರಾಮಚಂದ್ರ ರಾಯರು, M.B. & B.S., Ph.D. ವಿಶಾಖಪಟ್ಣ
೨೦ ,, ಎಲ್ಲೂರು ಗುತ್ತು ಅಚ್ಚಣ್ಣ ಶೆಟ್ಟರು, ವೈನಾಡ್.

೨೧ ಶ್ರೀ ಎ. ಬಿ. ಕೃಷ್ಣರಾಜರು, ಉಡುಪಿ.
೨೨ ,, ಪಾದೂರು ಕೃಷ್ಣಯ್ಯ ಶೆಟ್ಟರು, ಪರೇಲ್, ಬೊಂಬಾಯಿ.
೨೩ ,, ಯು. ವೆಂಕಟರಾಯ ಕಾಮತರು, ಉಡುಪಿ.

---

## ಪೋಷಕರು †

೧ ಶ್ರೀ ಕೆ. ರಾಮ ಕಾಮತರು, ಮರ್ಚಂಟ್, ಕಟಪಾಡಿ.
೨ ,, ನಂದ್ಯಪ್ಪ ಹೆಗ್ಡೇರು, ಯೇಣಗುಡ್ಡೆ.
೩ ,, ಕೆ. ಕೃಷ್ಣಯ್ಯ ಶೆಟ್ಟರು, ಪಡುಮನೆ, ಕೆಮ್ಮೂರು.
೪ ,, ಕೆ. ನಾರಾಯಣ ಶೆಟ್ಟರು, ಜಮೀನ್ದಾರ್, ಕೊರಂಗ್ರಪಾಡಿ.
೫ ,, ಯು. ಪರಮೇಶ್ವರ ಮೇಸ್ತರು, ಫಿಜಿಸಿಯನ್ ಉದ್ಯಾವರ.
೬ ,, ಪುತ್ತಿಗೆ ಸುಬ್ಬಣ್ಣಾಚಾರ್ಯರು, ಉದಿಯಾವರ ಕುದುರು.
೭ ,, ಬೆಳ್ಕಳೆ ಕೆರೆಮನೆ ವೆಂಕಪ್ಪ ಶೆಟ್ಟರು, ಉಡುಪಿ.
೮ ,, ಕುತ್ಪಾಡಿ ತಿಮ್ಮಪ್ಪ ಶೆಟ್ಟರು, ಉಡುಪಿ.
೯ ,, ಬೆಳ್ಕಳೆ ಕೆರೆಮನೆ ನಾರಾಯಣ ಶೆಟ್ಟರು, ಉಡುಪಿ.
೧೦ ,, ಕೊರಂಗ್ರಪಾಡಿ ತೇಜಪ್ಪ ಶೆಟ್ಟರು, ಉಡುಪಿ.
೧೧ ,, ಕವಿರಾಜ ಮಹಾಬಲ ಶೆಟ್ಟರು, ಮಂಗಳೂರು
೧೨ ಶ್ರೀಮತಿ ಮಂದಾಕಿನಿ ಬಾಯಿಯವರು, ವಿದುಷಿ, ಮದ್ರಾಸು.
೧೩ ಶ್ರೀ ಎಂ. ಪದ್ಮನಾಭ ರಾಯರು, ಜಮೀನ್ದಾರ್, ಮಟ್ಟು.
೧೪ ,, ಯು. ರಾಮಚಂದ್ರ ಮಯ್ಯರು, ಅಧ್ಯಾಪಕ, ಉದ್ಯಾವರ.
೧೫ ,, ಎಂ ವಿಟ್ಠಲ ಶೆಟ್ಟರು, ಅಧ್ಯಾಪಕ, ಮಲ್ಲಾರು.
೧೬ ,, ಕೆ. ವಿ. ಕೃಷ್ಣಯ್ಯನವರು, ಹೆಡ್ಮಾಸ್ಟರ್, ಮಲ್ಲಾರು.
೧೭ ,, ಕೆ. ಶೀನು ಶೆಟ್ಟರು, ಅಧ್ಯಾಪಕ, ಕಾಪು
೧೮ ,, ಎಂ. ಅನಂತ ಕೃಷ್ಣರಾಯರು, ಹೆಡ್ಮಾಸ್ಟರ್, ಮಟ್ಟು.
೧೯ ,, ಪಿ. ಮುದ್ದಣ್ಣ ಶೆಟ್ಟರು, ಬಿ ಯಂ. ಸ್ಕೂಲ್, ಪಾದೂರು.
೨೦ ,, ಯು ದಾದು, ಹೆಡ್ಮಾಸ್ಟರ್ ಕೈಪುಂಜಾಲ್.
೨೧ ,, ಕೆ. ಮುದ್ದಣ್ಣ ಶೆಟ್ಟರು, ಕೆನರಾ ನರ್ಸರಿ, ಕಾಪು
೨೨ ,, ಕೆ. ಪದ್ಮನಾಭ ಶ್ಯಾನುಭಾಗರು, ಹೆ. ಮಾ. ಕರಂದ್ವಾಡಿ

೨೩ ಶ್ರೀ ಕೆ. ಅಂತಯ್ಯ ಹೆಗ್ಡೇರು, ಜಮೀನ್ದಾರ್, ಕೂರಾಡಿ.

೨೪ ,, ಮಟ್ಪಾಡಿ ಶೀನಪ್ಪ ಶೆಟ್ಟರು, ಟೀಚರ್, ಬಾರ್ಕೂರು.

೨೫ ,, ಬೈಕಾಡಿ ರಾಮಣ್ಣ ಶೆಟ್ಟರು, ಅಧ್ಯಾಪಕ, ಬಾರ್ಕೂರು.

೨೬ ,, ಪೆರಂಪಳ್ಳಿ ಶೀನಪ್ಪ ಶೆಟ್ಟರು, ಟೀಚರ್. ಉಡುಪಿ.

೨೭ ,, ಹೆರ್ಗ ವಿಟ್ಠಲ ಶೆಟ್ಟರು, ಅಧ್ಯಾಪಕ, ನ್ಯಾಬರಕಟ್ಟೆ.

೨೮ ,, ವೈ. ಶ್ಯಾಮರಾಯ ಹೆಗ್ಡೇರು, ಜಮೀನ್ದಾರ್, ಯೇಣಗುಡ್ಡೆ.

೨೯ ,, ಎಂ. ನಾರಾಯಣ ಶೆಟ್ಟರು, ಟೀಚರ್, ಮರ್ಣೆ.

೩೦ ಮೆಸ್ಸರ್ಸ್ 'ಹೆಗ್ಡೆ ಬ್ರದರ್ಸ್'ರು, ಎರ್ಮಾಳ್

೩೧ ಶ್ರೀ ವೈ. ಅಂಗರ ಶೆಟ್ಟರು, ಅಧ್ಯಾಪಕ, ಎರ್ಮಾಳ್.

೩೨ ,, ವೈ. ತಬ್ರ ಶೆಟ್ಟರು, ಅಧ್ಯಾಪಕ, ಎರ್ಮಾಳ್.

೩೩ ,, ಪಿ. ರಾಮರಾಯರು, ಉಪಾಧ್ಯಾಯ, ಎರ್ಮಾಳ್.

೩೪ ,, ಮೆಸ್ಸರ್ಸ್ 'ಪ್ರಭು ಬ್ರದರ್ಸ್'ರು, ಪಡುಬಿದ್ರಿ.

೩೫ ,, ಯು. ನಾಗಪ್ಪ, ಫಿಶ್ಚರೀಸ್ ಇನ್ಸ್ಫೆಕ್ಟರ್, ಮಂಗಳೂರು.

೩೬ ,, ಎಚ್. ಮುತ್ತಯ್ಯ, ಸಬ್ ಕಲೆಕ್ಟರ್ಸ್ ಆಫೀಸ್, ಕುಂದಾಪುರ.

೩೭ ,, ಬಿ. ವಿಟ್ಠಲ ಶೆಟ್ಟರು, ಅಧ್ಯಾಪಕ, ಪಡುಬಿದ್ರಿ.

೩೮ ,, ಅಂಬಾಡಿ ಬೀಡು ಸೂರ್ಯಣ್ಣ ಶೆಟ್ಟರು, ಬೊಂಬಾಯಿ.

೩೯ ,, ಎಂ. ಎಸ್. ಅಧಿಕಾರಿಗಳು, ಪ್ಲೀಡರ್, ಕಾರ್ಕಳ.

೪೦ ,, ಪಂಡಿತ್ ಕೆ. ನಾರಾಯಣ ರಾಯರು, ಕಾರ್ಕಳ.

೪೧ ,, ಪಿ. ವಿ. ಉಪಾಧ್ಯಾಯರು, ವಕೀಲ್, ಕಾರ್ಕಳ.

೪೨ ,, ಕೆ. ಎಂ. ಹೆಗ್ಡೇರು, ವಕೀಲ್, ಕಾರ್ಕಳ.

೪೩ ,, ಕಟಪಾಡಿ ರಂಗಪ್ಪ ಕಿಣಿಯರು, ಬೊಂಬಾಯಿ.

೪೪ ಡಾಕ್ಟರ್ ಯು. ಎಸ್. ರಾವ್, ಬೊಂಬಾಯಿ.

೪೫ ಶ್ರೀ ಕೆ. ವಿ. ಹೆಬ್ಬಾರ್, ಕಟ್ಟಂಗೆರೆ.

೪೬ ,, ವಿ. ವಿ ಕಾಣೇಮಾರ್, ವೆಲ್‌ಕಂ ಹೋಟೆಲ್, ಬೊಂಬಾಯಿ.

೪೭ ,, ಟಿ. ಮುತ್ತಪ್ಪ, ಹೆ. ಮಾ. ಫಿಶ್ಚರೀಸ್ ಸ್ಕೂಲ್, ಮಲ್ಪೆ.

೪೮ ,, ಎಚ್. ವೀರಯ್ಯ ನಾಯ್ಕರು, ಅಧ್ಯಾಪಕ, ಕಾಪು.

೪೯ ,, ವಿ. ತುಕ್ರ ಶೆಟ್ಟರು, ಅಧ್ಯಾಪಕ, ಕನ್ಯಾನ, ಪುತ್ತೂರು.

೫೦ ಶ್ರೀ ಪಿ. ಮಹಾಲಿಂಗ ಶೆಟ್ಟರು, ಅಧ್ಯಾಪಕ, ಕಾಪು.
೫೧ ,, ಬಿ. ವೆಂಕಪ್ಪ ರೈಗಳು ಜಮೀನ್ದಾರ್, ಉಪ್ಪಿನಂಗಡಿ.
೫೨ ,, ಕುತ್ಯಾರು ರಾಮಣ್ಣ ಶೆಟ್ಟರು, ಕೇಂಜ ಕೆರೆಮನೆ, ಬೊಂಬಾಯಿ.
೫೩ ,, ಮಾಣಿಬೆಟ್ಟು ಕೃಷ್ಣಯ್ಯ ಹೆಗ್ಡೇರು, ಶಿರ್ವ
೫೪ ,, ದೇಜಪ್ಪ ಸಿ. ಅಮೀನ್, ಕೈಪುಂಜಾಲ್.
೫೫ ,, ಕೆ. ನಾಗಪ್ಪಯ್ಯ, ಡಿ| ಇ| ಆಫೀಸು, ಉಡುಪಿ.
೫೬ ,, ಎಂ ಶ್ರೀನಿವಾಸರಾವ್, ಡಿ| ಇ| ಆಫೀಸು, ಪುತ್ತೂರು.
೫೭ ,, ಕೆ. ಉಗ್ಗಪ್ಪ ಶೆಟ್ಟರು, ಕುರಿಯಾಲ, ಬಂಟವಾಳ.
೫೮ ,, ಮುತ್ತಣ್ಣ ಬುಡಲೆ, ಶೆಡ್ಯ, ಗುರುಪುರ.
೫೯ ,, ಬಿ. ಹೂವಯ್ಯ, ಹಾಲಿಕೋಡು, ಬಾರ್ಕೂರು.
೬೦ ,, ಎಚ್. ಸಂಜೀವ ಶೆಟ್ಟರು, B. A. L T. ಪುತ್ತೂರು.
೬೧ ,, ಅಡ್ವೆ ಕುಂಜರೈಮನೆ ರುಕ್ಕ ಶೆಟ್ಟರು, ಬೊಂಬಾಯಿ.
೬೨ ,, ಬೆಳಮಣ್ಣು ಸೂರಪ್ಪ ಶೆಟ್ಟರು, ಪರೇಲರೋಡು, ಬೊಂಬಾಯಿ.
೬೩ ,, ಯು. ವಿ ಆರಾಧ್ಯರು, ಜಮೀನ್ದಾರ್, ಉದ್ಯಾವರ
೬೪ ,, ಕೊರಂಗ್ರಪಾಡಿ ದೇವಯ್ಯ ಹೆಗ್ಡೇರು, ಬೊಂಬಾಯಿ
೬೫ ,, ಎಂ. ಬೊಮ್ಮಯ್ಯ ಶೆಟ್ಟರು, ಬಿ. ಎ. ಸ್ಕೂಲ್, ಉಚ್ಚಿಲ
೬೬ ,, ಮಹಾಬಲ ಶೆಟ್ಟರು, ಟೀಚರ್ ಮೆನೇಜರ್, ಎಡ್ಮೇರು.

ರೂ. 25 ಕೊಡುವವರು. § ರೂ. 10 ಕೊಡುವವರು

† ರೂ. 5 ಕೊಡುವವರು.